॥ ಶ್ರೀಃ ॥



ಶ್ರೀಮನ್ನಿಗಮಾಂತ ಮಹಾದೇಶಿಕ

ವಿರಚಿತಂ

# ಭಗವದ್ಧ್ಯಾನ ಸೋಪಾನಮ್

ಅನುವಾದ ಮತ್ತು ವಿವರಣೆ

ಡಾ॥ ಎಂ. ಎಸ್. ಅನಂತರಂಗಾಚಾರ್ಯ

ಮಂಡ್ಯ.

ಪ್ರಕಾಶಕರು :

ಶ್ರೀ ವೇದಾಂತ ದೇಶಿಕರವರ ಕೈಂಕರ್ಯಸಭಾ, (ರಿ.)

ತಿರುನಾರಾಯಣಪುರಂ

(ಮೇಲುಕೋಟೆ) (ಮೈಸೂರು ಸ್ಟೇಟ್)

೧೯೬೪

॥ ಶ್ರೀಃ ॥



ಶ್ರೀಮನ್ನಿಗಮಾಂತ ಮಹಾದೇಶಿಕ

ವಿರಚಿತಂ

# ಭಗವದ್ಧ್ಯಾನ ಸೋಪಾನಮ್

ಅನುವಾದ ಮತ್ತು ವಿವರಣೆ

ಡಾ॥ ಎನ್. ಎಸ್. ಅನಂತರಂಗಾಚಾರ್ಯ

ಮಂಡ್ಯ.

೧೯೭೪

# ಅರಿಕೆ.

ಶ್ರೀಮನ್ನಿಗಮಾಂತ ಮಹಾದೇಶಿಕರವರ ತಿರುನಕ್ಷತ್ರದ ಈ ಶುಭ ಸಂದರ್ಭದಲ್ಲಿ ಆಚಾರ್ಯರ ಈ ಸುಂದರ ಸ್ತೋತ್ರವನ್ನು ಕನ್ನಡ ಅನುವಾದ ಮತ್ತು ವಿವರಣೆಯೊಡನೆ ಪ್ರಕಾಶಪಡಿಸಲು ಸಾಧ್ಯವಾದುದಕ್ಕಾಗಿ ಸಂತೋಷಿಸುತ್ತೇವೆ. ಸಭೆಯವರು ಕೈಗೊಂಡಿರುವ ಬಹುಮುಖವಾದ ಕಾರ್ಯಭಾರದಲ್ಲಿ ಶ್ರೀಮದಾಚಾರ್ಯರ ಶ್ರೀಸೂಕ್ತಿಗಳ ರಸಾನುಭವವನ್ನು ಮಾಡಿಕೊಡುವುದೂ ಒಂದಾಗಿದೆ, ಈ ಮಹತ್ಕಾರ್ಯವನ್ನು ಸಭೆ ಈ ಪ್ರಕಟಣೆಯ ಮೂಲಕ ವಿನಮ್ರವಾಗಿ ಆರಂಭಿಸಲು ಯತ್ನಿಸಿದೆ. ಉದಾರರಾದ ಸಹೃದಯರು ಈ ಪ್ರಯತ್ನಕ್ಕೆ ತಮ್ಮ ಪೂರ್ಣ ಬೆಂಬಲವನ್ನು ಕೊಡುವರೆಂದು ನಂಬಿದ್ದೇವೆ.

ಈ ಸಭೆಯ ಧ್ಯೇಯವು ಸಫಲಗೊಳ್ಳುವಂತೆ ಈ ಪ್ರಕಟಣೆಗೆ ನೆರವಾದ ಡಾ|| ಅನಂತರಂಗಾಚಾರ್ಯರಿಗೂ, ಸಕಾಲದಲ್ಲಿ ಮುದ್ರಿಸಿಕೊಟ್ಟ ಮಂಡ್ಯದ ಶ್ರೀ ಜಯಲಕ್ಷ್ಮೀ ಪ್ರೆಸ್ ಶ್ರೀ ಸಿ. ಜಿ. ಪದ್ಮರಾಜಶರ್ಮರಿಗೂ ಸಭೆಯಪರವಾಗಿ ವಂದನೆಗಳು.

ಮುದ್ದಂ ರಾಮಸ್ವಾಮಯ್ಯಂಗಾರ್,
ಅಧ್ಯಕ್ಷ,
ವೇದಾಂತ ದೇಶಿಕರವರ ಕೈಂಕರ್ಯ ಸಭಾ, (ರಿ.)
ತಿರುನಾರಾಯಣಪುರಂ
(ಮೇಲುಕೋಟೆ)

ತಾ|| 5—10—64.

# ಅವತಾರಿಕೆ

ಶ್ರೀಮದ್ವೇಂಕಟನಾಥರು ಕ್ರಿ.ಶ. 13ನೇ ಶತಮಾನದ ಕೊನೆಯಭಾಗದಲ್ಲಿ ಅವತರಿಸಿ ಅನಾದಿಯಾದ ವಿಶಿಷ್ಟಾದ್ವೈತಸಿದ್ಧಾಂತವನ್ನು ಬೆಳಗಿದ ವಿಭೂತಿಪುರುಷರು. ಇವರು ಕವಿತಾರ್ಕಿಕಸಿಂಹರೆಂದೂ, ಸರ್ವತಂತ್ರಸ್ವತಂತ್ರರೆಂದೂ, ಘಂಟಾವತಾರರೆಂದೂ, ಪ್ರಸಿದ್ಧರಾಗಿದ್ದಾರೆ. ಇವರು ಎಷ್ಟು ದೊಡ್ಡ ಪಂಡಿತರಾಗಿದ್ದರೋ ಅಷ್ಟೇ ಶ್ರೇಷ್ಠಭಕ್ತರೂ ಆಗಿದ್ದರು. ಇವರು ಅನುಗ್ರಹಿಸಿರುವ ಗ್ರಂಥರಾಶಿ ಅಪಾರವಾಗಿದೆ. ಅವುಗಳನ್ನು ಮೂರು ಬಗೆಯಾಗಿ ವಿಂಗಡಿಸಬಹುದು.

೧) ಕಾವ್ಯಗಳು.

೨) ತತ್ತ್ವಗ್ರಂಥಗಳು.

೩) ಸ್ತೋತ್ರಗಳು.

ಬಹುವಿಧವಾದ ಗ್ರಂಥನಿರ್ಮಾಣದಂತೆಯೇ ಬಹುಭಾಷೆಗಳಲ್ಲಿ ಗ್ರಂಥನಿರ್ಮಾಣ ಮಾಡಿರುವುದೂ ಇವರ ವೈಶಿಷ್ಟ್ಯ. ಸಂಸ್ಕೃತ, ಪ್ರಾಕೃತ, ತಮಿಳು ಮುಂತಾದ ಭಾಷೆಗಳಲ್ಲಿ ಇವರ ಗ್ರಂಥಗಳಿವೆ. ವೇದಾಂತಾರ್ಥ ವಿಚಾರಗಳನ್ನೂ ರಹಸ್ಯಗಳನ್ನೂ ಸಾಮಾನ್ಯರಿಗೆಲ್ಲ ತಿಳಿಯುವಂತೆ ಅಂದಿನ ಜನತಾಭಾಷೆಯಾದ ತಮಿಳಿನಲ್ಲಿ ಪ್ರತಿಪಾದಿಸಿದ ಯಶಸ್ಸು ಇವರದು.

ಆಚಾರ್ಯರು ಭರತವರ್ಷದ ತತ್ತ್ವಜ್ಞಾನಿಗಳ ಹಾಗೂ ಭಕ್ತರ ಶ್ರೇಣಿಯಲ್ಲಿ ಗೌರವಸ್ಥಾನವನ್ನಲಂಕರಿಸಿದ್ದಾರೆ. ಅಸಾಧಾರಣವಾದ ಪಾಂಡಿತ್ಯ, ಗಂಭೀರವಾದ ವಾದಸರಣಿ, ಅಪ್ರಕಂಪ್ಯವಾದ ನಿಷ್ಠೆ, ಗಾಢವಾದ ಭಕ್ತಿ, ಭಗವದಿತರವಾದುದರಲ್ಲಿ ವೈರಾಗ್ಯ, ಸರಳವಾದ ಜೀವನ—ಇವುಗಳೆಲ್ಲದರಿಂದ ಶ್ರೀಮದಾಚಾರ್ಯರು ವಿಶ್ರುತರಾಗಿದ್ದಾರೆ. ಆಚಾರ್ಯರ ಭಗವನ್ನಿಷ್ಠೆಯನ್ನೂ, ಪರಮವೈರಾಗ್ಯವನ್ನೂ ಅದ್ವಿತೀಯವಾದ ಪಾಂಡಿತ್ಯವನ್ನೂ ಕೆಳಗಿನ ಮಾತುಗಳು ತೋರಿಸುತ್ತವೆ.

" ವಿಂಶತ್ಯಬ್ದೇ ವಿಶ್ರುತನಾನಾವಿಧವಿದ್ಯಃ
ತ್ರಿಂಶದ್ವಾರಂ ಶ್ರಾವಿತ ಶಾರೀರಕಭಾಷ್ಯಃ ।"

' ಯಃ ಖ್ಯಾತಿಲಾಭಪೂಜಾಸು ವಿಮುಖೋವೈಷ್ಣವೇ ಜನೇ ।
ಕ್ರಯಣೀಯ ದಶಾಂ ಪ್ರಾಪ್ತಃ ತಸ್ಮೈ ಭವ್ಯಾಯ ಮಂಗಳಂ ॥'

' ಶೇಷಾಯುಷ್ಯಪಿ ಶೇಷಿದಂಪತಿದಯಾದೀಕ್ಷಾಮುದೀಕ್ಷಾಮಹೇ ।'

ನಿರಂತರಂ ನಿರ್ವಿಶತಸ್ತ್ವದೀಯಂ
ಅಸ್ಪೃಷ್ಟಚಿಂತಾಪದಮಾಭಿರೂಪ್ಯಂ ।
ಸತ್ಯಂ ಶಪೇ ವಾರಣಶೈಲನಾಥ
ವೈಕುಂಠವಾಸೇಪಿ ನ ಮೇ ಅಭಿಲಾಷಃ ॥

ತ್ವಂ ಚೇತ್ಪ್ರಸೀದಸಿ ತವಾಸ್ಮಿ ಸಮೀಪತಶ್ಚೇತ್
ತ್ವಯ್ಯಸ್ತಿ ಭಕ್ತಿರನಘಾ ಕರಿಶೈಲನಾಥ ।
ಸಂಸೃಜ್ಯತೇ ಯದಿಚ ದಾಸಜನಸ್ತ್ವದೀಯಃ
ಸಂಸಾರ ಏಷ ಭಗವನ್ನಪವರ್ಗ ಏವ ॥

ಶ್ರೀಮದಾಚಾರ್ಯರ ಸ್ತೋತ್ರಗಳಲ್ಲಿ 'ಭಗವದ್ಧ್ಯಾನಸೋಪಾನ'ವು ಬಹಳ ರಸಮಯವಾದುದು. 'ರಸೋ ವೈ ಸಃ' ಎಂಬ ಶ್ರುತಿಯಂತೆ ರಸಸ್ವರೂಪನಾದ ಭಗವಂತನ ದಿವ್ಯಮಂಗಳ ವಿಗ್ರಹದ ಅನುಭವದಿಂದ ಭೋಗ್ಯವಾದುದು. ಶ್ರೀಮದಾಚಾರ್ಯರು ಶ್ರೀರಂಗಕ್ಷೇತ್ರದಲ್ಲಿ ವಾಸವಾಗಿದ್ದಾಗ ಶಿಷ್ಯರ ಮೇಲಿನ ದಯೆಯಿಂದ ಶ್ರೀರಂಗನಾಥನನ್ನು ಧ್ಯಾನಿಸಲು ಯೋಗ್ಯವಾದ ಈ ಸ್ತೋತ್ರವನ್ನು ರಚಿಸಿದರೆಂದು ಗೊತ್ತಾಗುತ್ತದೆ. ಶ್ರೀರಂಗನಾಥನ ದಿವ್ಯಮಂಗಳ ವಿಗ್ರಹದ ಒಂದೊಂದು ಅವಯವದ ಸೌಂದರ್ಯವನ್ನು ಒಂದೊಂದು ಶ್ಲೋಕದಿಂದ ಇಲ್ಲಿ ವರ್ಣಿಸಿದ್ದಾರೆ. ಭಗವಂತನ ಚೆಲುವಡಿಯ ಧ್ಯಾನದಿಂದ ಆರಂಭವಾಗಿ ಕ್ರಮವಾಗಿ ಮೊಣಕಾಲು, ಜಂಘೆ, ನಾಭಿಕಮಲ, ವಕ್ಷಃಸ್ಥಲ, ವದನಾರವಿಂದ ಮತ್ತು ದಿವ್ಯಕಿರೀಟ ಇವುಗಳ ಧ್ಯಾನದಲ್ಲಿ ಈ ಅನುಸಂಧಾನ ಪೂರ್ಣವಾಗುತ್ತದೆ ಶ್ರೀರಂಗನಾಥನು ದಿವ್ಯವಾದ ಸೌಂದರ್ಯದ ಪ್ರವಾಹವಿದ್ದಂತೆ. ಪ್ರವಾಹದಲ್ಲಿ ಅಲ್ಲಲ್ಲಿ ಆಳವಾದ

ಸುಳಿಗಳಿರುವಂತೆ ಭಗವಂತನ ಒಂದೊಂದು ಅವಯವದ ಸೌಂದರ್ಯವೂ ಆ ಪ್ರವಾಹದಲ್ಲಿ ನಮ್ಮನ್ನು ಸೆಳೆಯುತ್ತದೆ. ಪರಮಕಾರಣನಾದ ಶ್ರೀಮನಾರಾಯಣನು ಅರ್ಚಾವತಾರಿಯಾಗಿ ಶ್ರೀರಂಗಾದಿದಿವ್ಯಕ್ಷೇತ್ರಗಳಲ್ಲಿ ಆವಿರ್ಭವಿಸಿ ತನ್ನ ಸೌಂದರ್ಯಸೌಶೀಲ್ಯಾದಿಗಳಿಂದ ಭಕ್ತರನ್ನು ಮುಗ್ಧರನ್ನಾಗಿಸಿ ತನ್ನ ಸಂಶ್ಲೇಷದ ಪರಮಾನಂದವನ್ನು ಅವರಿಗೆ ಅನುಗ್ರಹಿಸುತ್ತಿದ್ದಾನೆ. ಇಂಥ ದಿವ್ಯಾದ್ಭುತಮೂರ್ತಿಯ ಸೌಂದರ್ಯಸೌಕುಮಾರ್ಯಾದಿಗಳನ್ನು ಶ್ರೀಮದಾಚಾರ್ಯರು ಆಪಾದಮಸ್ತಕವಾಗಿ ತಾವು ಅನುಭವಿಸಿ ತಮ್ಮ ಅನುಭವಪ್ರಕಾರವನ್ನು ಈ ಸ್ತೋತ್ರದಲ್ಲಿ ಹೃದಯಂಗಮವಾಗಿ ವರ್ಣಿಸಿದ್ದಾರೆ.

ಇಂಥ ಭಗವಂತನಿಗಿಂತ ಭೋಗ್ಯವಾದುದು ಮತ್ತೊಂದು ಇಲ್ಲದ ಕಾರಣದಿಂದಲೇ ಎಂದು ತೋರುತ್ತದೆ ಈ ಸ್ತೋತ್ರವನ್ನು ಭಾಗವತರು ಭೋಜನ ವೇಳೆಯಲ್ಲಿ ಅನುಸಂಧಾನಮಾಡುವ ಸಂಪ್ರದಾಯ ಬೆಳೆದುಬಂದಿದೆ. ರಾತ್ರಿ ಮಲಗುವ ಮೊದಲು ಈ ಸ್ತೋತ್ರದ ಅನುಸಂಧಾನಮಾಡಿ ಶ್ರೀ ರಂಗನಾಥನ ದಿವ್ಯಮಂಗಳರೂಪದ ಸ್ಮರಣೆಯನ್ನು ಮಾಡುವ ಪದ್ಧತಿಯೂ ಇದೆ. ಭಗವನ್ನಾಮಸ್ಮರಣೆ ಹೇಗಾದರೂ, ಯಾವಾಗಲಾದರೂ ಮಂಗಳಕರವಾದುದೇ ಸರಿ! ಪರಮಪಾವನನಾದ ಶ್ರೀರಂಗನಾಥನ ಭುವನಮೋಹಕಮೂರ್ತಿ ನಮ್ಮ ನೆನಹಿನಲ್ಲಿ ಚಿರಂತನವಾಗಿ ನಿಲ್ಲುವಂತೆ ಈ ಸ್ತೋತ್ರದ ಅನುಸಂಧಾನ ಫಲಿಸಲಿ.

ಇಂತು ಸಜ್ಜನವಿಧೇಯ,

ಎಸ್. ಎಸ್. ಅನಂತರಂಗಾಚಾರ್.

ಶ್ರೀಃ

# ಭಗವದ್ಧ್ಯಾನ ಸೋಪಾನಮ್

ಶ್ರೀಮಾನ್ವೇಂಕಟನಾಥಾರ್ಯಃ ಕವಿತಾರ್ಕಿಕ ಕೇಸರೀ ।
ವೇದಾಂತಾಚಾರ್ಯವರ್ಯೋ ಮೇ ಸನ್ನಿಧತ್ತಾಂಸದಾಹೃದಿ ॥

ಅಂತರ್ಜ್ಯೋತಿಃ ಕಿಮಪಿ ಯಮಿನಾಮಂಜನಂ ಯೋಗದೃಷ್ಟೇಃ
ಚಿಂತಾರತ್ನಂ ಸುಲಭಮಿಹ ನಃ ಸಿದ್ಧಿಮೋಕ್ಷಾನುರೂಪಮ್ ।
ದೀನಾನಾಥವ್ಯಸನಶಮನಂ ದೈವತಂ ದೈವತಾನಾಂ
ದಿವ್ಯಂ ಚಕ್ಷುಃ ಶ್ರುತಿಪರಿಷದಾಂ ದೃಶ್ಯತೇ ರಂಗಮಧ್ಯೇ ॥ ೧ ॥

(ಯಮಿನಾಂ ಕಿಮಪಿ ಅಂತರ್ಜ್ಯೋತಿಃ) ಯೋಗಿಗಳಿಗೆ ಅಂತರ್ಯಾಮಿ ರೂಪನಾದ ಅನಿರ್ವಚನೀಯ ಜ್ಯೋತಿಯೂ, (ಯೋಗದೃಷ್ಟೇಃ ಅಂಜನಂ) ಧ್ಯಾನವೆಂಬ ಕಣ್ಣಿಗೆ ಪ್ರಕಾಶಕವಾದ ಅಂಜನವೂ, (ಸಿದ್ಧಿಮೋಕ್ಷಾನುರೂಪಂ ಸುಲಭಂ ಚಿಂತಾರತ್ನಂ) ಲೌಕಿಕವಾದ ಸಿದ್ಧಿಗಳೇನು, ಮೋಕ್ಷವೇನು ಇವ ಕ್ಕೆಲ್ಲಾ ಕಾರಣವಾದ, ಸುಲಭವಾಗಿ ಲಭಿಸುವ, ನೆನೆದುದನ್ನು ನೀಡುವ ಚಿಂತಾಮಣಿಯೂ (ದೀನಾನಾಥವ್ಯಸನಶಮನಂ) ದುಃಖಿಗಳ ಮತ್ತು ಅನಾಥರ ದುಃಖವನ್ನು ಹೋಗಲಾಡಿಸುವುದೂ, (ದೈವತಾನಾಂ ದೈವತಂ) ಬ್ರಹ್ಮಾದಿ ದೇವತೆಗಳಿಗೂ ಉಪಾಸ್ಯದೇವತೆಯೂ, (ಶ್ರುತಿಪರಿಷದಾಂ ದಿವ್ಯಂ ಚಕ್ಷುಃ) ವೇದಸಮೂಹಕ್ಕೇ ಶ್ರೇಷ್ಠವಾದ ಕಣ್ಣಾದುದೂ ಆದ ಪರಬ್ರಹ್ಮತತ್ತ್ವವು (ಇಹರಂಗಮಧ್ಯೇ) ಇಲ್ಲಿಯೇ ಶ್ರೀರಂಗದ ಮಧ್ಯಪ್ರದೇಶದಲ್ಲಿಯೇ (ದೃಶ್ಯತೇ) ಗೋಚರಿಸುತ್ತದೆ !

ಭಗವಂತನು ಸಕಲ ಚರಾಚರವಸ್ತುಗಳಲ್ಲಿಯೂ ಅಂತರ್ಯಾಮಿಯಾ ಗಿರುವನಾದರೂ ಎಲ್ಲರಿಗೂ ಅಗೋಚರನಾಗಿದ್ದಾನೆ. ಪರ, ವ್ಯೂಹ,

Funding: Tattva Heritage Foundation,Kolkata. Digitization: eGangotri.



ವಿಭವ, ಹಾರ್ದ, ಅರ್ಚಾ ಎಂಬ ಐದು ವ್ಯೂಹಗಳಲ್ಲಿ ಭಗವಂತನಿದ್ದಾನೆ. ಪರಸ್ವರೂಪವನ್ನು ನಿತ್ಯಮುಕ್ತಾತ್ಮರು ಮಾತ್ರ ಸದಾ ನೋಡಬಲ್ಲರು. ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ವ್ಯೂಹಾವತಾರಗಳು ಬ್ರಹ್ಮಾದಿ ದೇವತೆಗಳಿಗೆ ಮಾತ್ರ ಸುಲಭವಾಗಿ ಗೋಚರಿಸುವುವು. ಶ್ರೀರಾಮಕೃಷ್ಣಾದಿ ವಿಭವಾವತಾರಗಳು ಆಯಾ ಕಾಲದವರಿಗೆ ಮಾತ್ರ ಗೋಚರವಾದ ಕಾರಣ ಬೇರೆಕಾಲದಲ್ಲಿ ದುರ್ಲಭಗಳಾಗಿವೆ. ಸಂಸಾರಸಾಗರದಲ್ಲಿ ತೊಳಲುವ ಚೇತನರಿಗೆ ಧ್ಯಾನಿಸಲು ಮೇಲಿನ ನಾಲ್ಕು ವ್ಯೂಹಗಳೂ ದುರ್ಲಭಗಳು. ಆದ್ದರಿಂದಲೇ ಪರಮ ಕರುಣಾಕರನಾದ ಭಗವಂತನು 'ಬಿಂಬಾಕೃತ್ಯಾತ್ಮನಾಬಿಂಬೇ' ಎಂಬಂತೆ ಅರ್ಚಾವತಾರಗಳನ್ನು ಪರಿಗ್ರಹಿಸಿ ಶ್ರೀರಂಗಾದಿ ದಿವ್ಯಕ್ಷೇತ್ರಗಳಲ್ಲಿ ಎಲ್ಲಕಾಲದಲ್ಲಿಯೂ ಎಲ್ಲರಿಗೂ ತನ್ನ ಸಂದರ್ಶನವನ್ನೀಯುತ್ತಿದ್ದಾನೆ. ಅರ್ಚಾವತಾರಗಳು ಸರ್ವರಿಂದಲೂ ಸೇವ್ಯಗಳಾಗಿವೆ. ಇತರ ಎಲ್ಲ ವ್ಯೂಹಗಳಿಗಿಂತ ಹೆಚ್ಚಳವನ್ನು ಹೊಂದಿವೆ; ಆಶ್ರಯ ಸುಲಭವಾಗಿವೆ. ಮಾನವಕೋಟಿ ಈ ರೂಪದಲ್ಲಿ ಭಗವಂತನನ್ನು ಸೇವಿಸಿ ಜ್ಞಾನಭಕ್ತಿ ವೈರಾಗ್ಯಗಳನ್ನು ಹೊಂದಿ ತಮ್ಮ ಜನ್ಮವನ್ನು ಸಫಲಮಾಡಿಕೊಳ್ಳಬಹುದು.

ಶ್ರೀರಂಗದಲ್ಲಿ ಶ್ರೀರಂಗನಾಥನು ಉನ್ನತವಾದ ರಂಗಮಂಟಪದಲ್ಲಿ ನಟವರನು ಹೇಗೋ ಹಾಗೆ ವಿರಾಜಮಾನನಾಗಿದ್ದಾನೆ. ತನ್ನ ದಿವ್ಯಾವಯವಗಳ ಸೌಕುಮಾರ್ಯಾದಿಗಳಿಂದ ಭಕ್ತರನ್ನು ವಶಪಡಿಸಿಕೊಳ್ಳುತ್ತಿದ್ದಾನೆ. ತನ್ನ ಸಾನ್ನಿಧ್ಯವನ್ನು ಅಲ್ಲಿ ನೆಲೆಗೊಳಿಸಿ ಎಲ್ಲರಿಗೂ ಧ್ಯಾನಗೋಚರನಾಗಿದ್ದಾನೆ. ಇವನನ್ನು ಸಂದರ್ಶಿಸಿ ಧ್ಯಾನಸ್ತೋತ್ರಾದಿಗಳಿಂದ ನಾವು ಉದ್ಧಾರವಾಗಬೇಕು.

ಈ ಶ್ಲೋಕದಲ್ಲಿ ಶ್ರೀಮದಾಚಾರ್ಯರು ಭಗವಂತನ ಸ್ವರೂಪರೂಪಗಳ ವರ್ಣನೆಮಾಡಿದ್ದಾರೆ. ಪರಬ್ರಹ್ಮವಸ್ತು ಯಾವ ದೋಷಕ್ಕೂ ಒಳಗಾಗಿಲ್ಲ; ಎಲ್ಲ ಸದ್ಗುಣಗಳಿಗೂ ಆಕರವಾಗಿದೆ. ಇದಕ್ಕೆ 'ಉಭಯಲಿಂಗತ್ವ' ಎಂದು ಹೆಸರು. ಪರಬ್ರಹ್ಮವಸ್ತುವಿನಲ್ಲಿ ಹಾಗೆಯೇ 'ಪರತ್ವ' ಮತ್ತು 'ಸೌಲಭ್ಯ' ಎಂಬ ಗುಣಗಳೆರಡರ ಅಪೂರ್ವವಾದ ಯೋಗವಿದೆ. 'ದೈವತಾನಾಂ ದೈವತಂ', 'ಶ್ರುತಿಪರಿಷದಾಂ ದಿವ್ಯಂ ಚಕ್ಷುಃ' 'ಅಂತರ್ಜ್ಯೋತಿಃ' ಎಂಬುವುಗಳಿಂದ ಭಗವಂತನ ಪರತ್ವವನ್ನೂ 'ದೀನಾನಾಥವ್ಯಸನಶಮನಂ',

'ಸಿದ್ಧಿ ಮೋಕ್ಷಾನುರೂಪಂ ಸುಲಭಂ ಚಿಂತಾರತ್ನಂ' ಎಂಬುವುದರಿಂದ ಅವನ ಸೌಲಭ್ಯವನ್ನೂ ಆಚಾರ್ಯರು ಸೂಚಿಸಿದ್ದಾರೆ. 'ಪಶವಃ ಪಾಶಿತಾಃ ಪೂರ್ವಂ ಪರಮೇಣಸ್ವಲೀಲಯಾ। ತೇನೈವ ಮೋಚನೀಯಾಸ್ತೇ ನಾನ್ಯೈಸ್ತತ್ಪ್ರೋಷಕಾರಿಭಿಃ॥' ಎಂದು ತಿಳಿಸಿರುವಂತೆ ಸಕಲಕಾರ್ಯಸಮರ್ಥನಾದ ಭಗವಂತನ ಉಪಾಸನೆಯಿಂದಲೇ ಸಂಸಾರಬಂಧನದ ಬಿಡುಗಡೆ ಆದೀತು! ಸರ್ವಕಾರಣನೂ ಸರ್ವಶಕ್ತನೂ ಆದ ಪ್ರಭು ಸರ್ವರಕ್ಷಕನೂ ಆಗಿದ್ದಾನೆ. ಈ ಲೋಕದಲ್ಲಿ ಶ್ರೀರಂಗನಾಥನೇ ನಮಗೆ ಎಲ್ಲ ಬಗೆಯ ಇಷ್ಟಾರ್ಥಗಳನ್ನೂ ನೀಡುವವನಾಗಿದ್ದಾನೆ. ಗೀತೆಯಲ್ಲಿ 'ಆರ್ತೋಜಿಜ್ಞಾಸುರರ್ಥಾರ್ಥೀ ಜ್ಞಾನೀಚ ಭರತರ್ಷಭ' ಎಂದು ಹೇಳಿ ಭಗವಂತನನ್ನು ನಾಲ್ಕು ಬಗೆಯ ಭಕ್ತರುಗಳು ಸೇವಿಸುವರೆಂದು ತಿಳಿಸಿದೆ. ಐಹಿಕವಾದ ಐಶ್ವರ್ಯವಾಗಲೀ, ಕೈವಲ್ಯವಾಗಲೀ ಭಗವತ್ಪ್ರಾಪ್ತಿಯೇ ಆಗಲಿ ಆ ಭಗವಂತನ ದಯೆಯಿಂದಲೇ ಲಭಿಸಬೇಕು. ಹೀಗೆ ಕೋರಿದುದನ್ನು ಕರುಣಿಸುವುದರಿಂದಲೇ ಅವನು 'ಚಿಂತಾರತ್ನ' ವಾಗಿದ್ದಾನೆ. ಯಾವ ಸ್ವಾಮಿಯು ನಮ್ಮ ರಕ್ಷಕನಾಗಿ ನಮ್ಮ ಸಕಲಾಭೀಷ್ಟಗಳನ್ನೂನೀಡುವ ಚಿಂತಾಮಣಿಯಾಗಿದ್ದಾನೋ, ಯಾವನು ವೇದಗಳ ಸಮೂಹಕ್ಕೇ 'ಸರ್ವೇಂದ್ರಿಯಾಣಾಂ ನಯನಂ ಪ್ರಧಾನಂ' ಎಂಬಂತೆ ಶ್ರೇಷ್ಠವಾದ ಕಣ್ಣಾಗಿದ್ದಾನೋ ಯಾವನು ಸಕಲ ಲೋಕಗಳ ಸರ್ವಕಾರ್ಯಗಳಿಗೂ ನಿರ್ವಾಹಕನೋ ಅಂಥ ಸರ್ವಸ್ವಾತ್ಮಪರನಾದ ಭಗವಂತನು ಶ್ರೀರಂಗಕ್ಷೇತ್ರದ ಮಧ್ಯದಲ್ಲಿ ಎಲ್ಲರ ಚರ್ಮಚಕ್ಷುಸ್ಸಿಗೂ ಗೋಚರವಾಗುವಂತೆ ಪವಡಿಸಿದ್ದಾನೆ!

ನಮಗೆ ಭಗವಂತನು ಪ್ರಾಪ್ಯನಾಗಿರುವಂತೆ ಪ್ರಾಪಕನೂ ಆಗಿದ್ದಾನೆ. ಅವನನ್ನು ಪಡೆಯಲು ಅವನೇ ನಮಗೆ ಉಪಾಯ. ಸಿದ್ಧೋಪಾಯನಾದ ಸ್ವಾಮಿಯೂ ನಾವು ಅನುಷ್ಠಿಸುವ ಭಕ್ತಿಪ್ರಪತ್ತಿಗಳನ್ನೇ ವ್ಯಾಜವಾಗಿಟ್ಟುಕೊಂಡು ನಮ್ಮನ್ನು ರಕ್ಷಿಸುವವನಾಗಿದ್ದಾನೆ. 'ಅಮೃತಸ್ಯೈಷಸೇತುಃ' 'ಅಗ್ನೇನಯಸುಪಥಾ', 'ದೈವೀಂನಾವಂಆರುಹೇಮಾಸ್ವಸ್ತಯೇ' ಮೊದಲಾದುವು ಈ ಅಂಶವನ್ನು ಸೂಚಿಸುತ್ತವೆ. ಆಚಾರ್ಯರೂ ಈ ಶ್ಲೋಕದಲ್ಲಿ ಭಗವಂತನ ಉಪಾಯತ್ವವನ್ನು ಒಂದೊಂದು ವಿಶೇಷಣದಲ್ಲಿಯೂ ಸಾಭಿಪ್ರಾಯವಾಗಿ ಹೇಳಿದ್ದಾರೆ. "ಯೋಗದೃಷ್ಟೇಃ ಅಂಜನಂ" ಧ್ಯಾನವೆಂಬ ದೃಷ್ಟಿಗೆ ಪ್ರಕಾಶವನ್ನೀಯುವ ಸಾಧನ ಅವನು!

'ಸಿದ್ಧಾಂಜನಮಿವಶ್ಯಾಮಾಂ ತಪತನುಂ ನಿಜವಿಲೋಚನೇಷುಕ್ಷಿಪಂತಃ ।
ಅಚ್ಯುತಲಕ್ಷ್ಮೀನಿವಾಸಂ ನಿತ್ಯನಿಗೂಢಂ ನಿಧಿಮಿವ ಪಶ್ಯಂತಿತ್ವಾಮ್ ॥'

ಎಂದು ಈ ಅಂಶವನ್ನು ಆಚಾರ್ಯರು ಅಚ್ಯುತಶತಕದಲ್ಲಿ ಹೇಳಿದ್ದಾರೆ. ಇಷ್ಟಾರ್ಥವನ್ನು ಸಲ್ಲಿಸುವ ಚಿಂತಾಮಣಿಯಂತೆ ಅವನೂ ಸರ್ವಾಪೇಕ್ಷೆಗಳನ್ನು ಕರುಣಿಸುವ ಸಾಧನವಾಗಿದ್ದಾನೆ. ನಮ್ಮ ದುಃಖ ಹಾಗೂ ಕಷ್ಟಗಳನ್ನು ಕಳೆಯುವವನೂ ಅವನೇ. ಈ ಕ್ರಮದಲ್ಲಿ ಭಗವಂತನು ನಮ್ಮ ಪುರುಷಾರ್ಥಗಳ ಪ್ರಾಪ್ತಿಗೆ ಸಾಧನವಾಗಿದ್ದಾನೆ ಹೀಗೆ ಭಗವಂತನ ಉಭಯಲಿಂಗತ್ವ, ಪರತ್ವ ಹಾಗೂ ಸೌಲಭ್ಯ ಮತ್ತು ಉಪೇಯತ್ವ ಉಪಾಯತ್ವಗಳನ್ನು ಈ ಶ್ಲೋಕದಲ್ಲಿ ಆಚಾರ್ಯರು ವರ್ಣಿಸಿದ್ದಾರೆ.

ವೇಲಾತೀತಶ್ರುತಿಪರಿಮಳಂ ವೇಧಸಾಂ ಮೌಳಿಸೇವ್ಯಂ
ಪ್ರಾದುರ್ಭೂತಂ ಕನಕಸರಿತಃ ಸೈಕತೇ ಹಂಸಜುಷ್ಟೇ ।
ಲಕ್ಷ್ಮೀಭೂಮ್ಯೋಃ ಕರಸರಸಿಜೈರ್ಲಾಲಿತಂ ರಂಗಭರ್ತುಃ
ಪಾದಾಂಭೋಜಂ ಪ್ರತಿಫಲತಿ ಮೇ ಭಾವನಾದೀರ್ಘಿಕಾಯಾಂ ॥ ೩ ॥

(ವೇಲಾತೀತಶ್ರುತಿಪರಿಮಳಂ) ಎಲ್ಲೆ ಇಲ್ಲದಂತೆ ಶ್ರುತಿಯಿಂದ ಹೇಳಲ್ಪಟ್ಟ ಹಿರಿಮೆಯೆಂಬ ಪರಿಮಳವುಳ್ಳ, (ವೇಧಸಾಂ ಮೌಳಿಸೇವ್ಯಂ) ಅನೇಕಾನೇಕ ಬ್ರಹ್ಮದೇವರುಗಳಿಂದ ತಲೆಬಾಗಿ ಸೇವಿಸಲ್ಪಡುವ, (ಕನಕಸರಿತಃ) ಕಾವೇರೀ ನದಿಯ (ಹಂಸಜುಷ್ಟೇ ಸೈಕತೇಪ್ರಾದುರ್ಭೂತಂ) ಹಂಸಗಳೊಡನೆ (ಪರಮಹಂಸರೊಡನೆ) ಕೂಡಿದ ಮಳಲದಂಡೆಯಲ್ಲಿ ಆವಿರ್ಭವಿಸಿರುವ, (ಲಕ್ಷ್ಮೀಭೂಮ್ಯೋಃ ಕರಸರಸಿ ಜೈರ್ಲಾಲಿತಂ) ಶ್ರೀದೇವಿ ಭೂದೇವಿಗಳ ಕರಕಮಲಗಳಿಂದ ಉಪಚಾರಮಾಡಲ್ಪಡುವ ( ರಂಗಭರ್ತುಃ ಪಾದಾಂಭೋಜಂ ) ಶ್ರೀರಂಗನಾಥನ ಪದಪದ್ಮವು (ಮೇ) ನನ್ನ (ಭಾವನಾದೀರ್ಘಿಕಾಯಾಂ) ಧ್ಯಾನವೆಂಬ ಸರೋವರದಲ್ಲಿ (ಪ್ರತಿಫಲತಿ) ಪ್ರತಿಬಿಂಬಿಸುತ್ತದೆ.

ಶ್ರೀರಂಗನಾಥನ ದಿವ್ಯಮಂಗಳ ವಿಗ್ರಹದ ಅನುಭವ ಇಲ್ಲಿಂದ ಮೊದಲಾಗುತ್ತದೆ. ಈ ಸ್ತೋತ್ರದಲ್ಲಿ ಆಚಾರ್ಯರು ರಂಗನಾಥನ ಒಂದೊಂದು ಅವಯವದ ಸೌಂದರ್ಯವನ್ನೂ ಆರೋಹಕ್ರಮದಲ್ಲಿ ಪಾದದಿಂದಾರಂಭಿಸಿ ಮಕುಟದವರೆಗೆ ಅನುಭವಿಸಿದ್ದಾರೆ. ಈ ಶ್ಲೋಕದಲ್ಲಿ ಪಾದಸೌಂದರ್ಯವನ್ನನುಭವಿಸಿ

Funding: Tattva Heritage Foundation,Kolkata. Digitization: eGangotri.



ಡ್ಡಾರೆ. ‘ ವೇಲಾತೀತಶ್ರುತಿಪರಿಮಳಂ ’ ಎಂಬುವುದರಿಂದ ಭಗವಂತನ ಎಲ್ಲೆಯಿಲ್ಲದ ಮಹಿಮೆಯನ್ನು ವೇದವು ಹೊಗಳುತ್ತಿದೆ ಎಂದು ತಿಳಿಸಿ ಭಗವಂತನ ಪರತ್ವ ಸೂಚಿತವಾಗಿದೆ. ಶ್ರೀದೇವಿ ಭೂದೇವಿಯರಿಂದ ಸಂಸೇವ್ಯವಾದ ಪಾದ ಪದ್ಮದ ಭೋಗ್ಯತೆಯೂ ಪ್ರಸ್ತುತವಾಯಿತು. ಪಾದವನ್ನೇಕೆ ಮೊದಲು ಸ್ತುತಿಸಬೇಕು ? ‘ ಅನತಿಕ್ರಮಣೀಯಂ ಹಿ ಪಾದಗ್ರಹಣಂ ’ ಎಂಬಂತೆ ಅಪರಾಧವೆಸಗಿದ ನಮ್ಮಂಥ ಸಂಸಾರಿಗಳಿಗೆ ಉತ್ತಾರಕವಾದುದು ಭಗವಂತನ ಪಾದವೇ. ಆದರಿಂದಲೇ ಮೊದಲು ನಾವು ಎಲ್ಲಿ ಶರಣಾಗಬೇಕೋ ಆ ಪಾದದ ಮಹತ್ವವನ್ನು ಕೊಂಡಾಡಿದೆ. ಭಗವಂತನ ಸಿರಿಯಡಿಯನ್ನು ಆಶ್ರಯಿಸಿ ನಾವು ಉದ್ಧಾರವಾಗಬೇಕು. ಆ ಶರಣ್ಯನ ಪಾದವೇ ನಮಗೆ ರಕ್ಷಕ. ಹೀಗೆ ದ್ವಯಮಂತ್ರಾರ್ಥವನ್ನು ತಿಳಿಸುವುದಕ್ಕಾಗಿ ಭಗವಂತನ ಪಾದವನ್ನು ಮೊದಲು ಧ್ಯಾನಿಸುತ್ತಿದ್ದಾರೆ. ಚೆಲುವಾದ ಭಗವಂತನ ಪಾದಾರವಿಂದವನ್ನು ನಾನು ನನ್ನ ಮನಸ್ಸಿನಲ್ಲಿ ಸದಾ ಧ್ಯಾನಿಸುವೆನೆಂಬುದು ಇದರ ಭಾವ.

ಚಿತ್ರಾಕಾರಾಂ ಕಟಕರುಚಿಭಿಃ ಚಾರುವೃತ್ತಾನುಪೂರ್ವ್ಯಾಂ
ಕಾಲೇ ದೂತ್ಯದ್ರುತತರಗತಿಂ ಕಾಂತಿಲೀಲಾಕಲಾಚೀಮ್ ।
ಜಾನುಚ್ಛಾಯಾದ್ವಿಗುಣಸುಭಗಾಂ ರಂಗಭರ್ತುರ್ಮದಾತ್ಮಾ
ಜಂಘಾಂ ದೃಷ್ಟ್ವಾ ಜನನಪದವೀ ಜಾಂಘಿಕತ್ವಂ ಜಹಾತಿ ॥ ೩ ॥

(ಕಟಕರುಚಿಭಿಃ) ಚಿನ್ನದ ಕಾಲ್ಬಳೆಗಳ ಕಾಂತಿಗಳಿಂದ (ಚಿತ್ರಾಕಾರಾಂ) ನಾನಾ ಬಣ್ಣಗಳನ್ನುಳ್ಳದೂ (ಚಾರುವೃತ್ತಾನುಪೂರ್ವ್ಯಾಂ) ಮೋಹಕವಾಗಿಯೂ ದುಂಡಾಗಿಯೂ ಇರುವಂಥದೂ, (ಕಾಲೇ ದೂತ್ಯದ್ರುತತರಗತಿಂ)ಪಾಂಡವರಿಗೆ ದೂತನಾಗಿದ್ದಾಗ ದೂತನ ಕೆಲಸಮಾಡಲು ಬಹಳ ವೇಗದ ನಡಗೆಯನ್ನುಳ್ಳದೂ, (ಕಾಂತಿಲೀಲಾಕಳಾಚೀಮ್) ಕಾಂತಿಮಯವಾದ ವಿಲಾಸದ ಪಡಿಗವಾದುದೂ (ಜಾನುಚ್ಛಾಯಾ ದ್ವಿಗುಣಸುಭಗಾಂ) ಮಂಡಿಗಳ ಕಾಂತಿಯಿಂದ ಇಮ್ಮಡಿಸಲ್ಪಟ್ಟ ಚೆಲುವನ್ನುಳ್ಳದೂ, ಆದ (ರಂಗಭರ್ತುಃ ಜಂಘಾಂ) ಶ್ರೀರಂಗನಾಥನ ಮೊಣಕಾಲನ್ನು (ದೃಷ್ಟ್ವಾ) ಸಂದರ್ಶಿಸಿ (ಮದಾತ್ಮಾ) ನನ್ನಆತ್ಮವು (ಜನನಪದವೀಜಾಂಘಿಕತ್ವಂ) ಜನನಪರಂಪರೆಯ ಮಾರ್ಗದಲ್ಲಿ ನಡೆಯಲು ಬೇಕಾದ ಮೊಣಕಾಲಿನವೇಗವನ್ನು (ಜಹಾತಿ) ಬಿಡುತ್ತದೆ.

ಹಿಂದಿನ ಶ್ಲೋಕದಲ್ಲಿ ಭಗವಂತನ ಚರಣಾರವಿಂದದ ಮಹಿಮೆಯನ್ನು ಹೇಳಲಾಯಿತು. ಭಗವಂತನ ದಿವ್ಯಮಂಗಳ ವಿಗ್ರಹದಲ್ಲಿ ಪಾದಪದ್ಮವು ಭಕ್ತರುಗಳಿಗೆ ಅಗಾಧವಾದ ಜಲಾಶಯದಲ್ಲಿ ಇಳಿಯಲು ಅನುಕೂಲವಾದ ಸ್ನಾನಘಟ್ಟದಂತೆ. ಈ ಶ್ಲೋಕದಲ್ಲಿ ಪಾದಾರವಿಂದದ ಮೇಲಿರುವ ಮೊಣಕಾಲಿನ ಸೊಬಗನ್ನು ವರ್ಣಿಸಿದ್ದಾರೆ. ಭಗವಂತನು ಪಾದದಲ್ಲಿ ಧರಿಸಿರುವ ನವರತ್ನಖಚಿತವಾದ ನೂಪುರಗಳ ನಾನಾ ವರ್ಣದ ಕಾಂತಿ ಆ ಮೊಣಕಾಲನ್ನು ಚೆಲುವಾಗಿಸಿದೆ. ದುಂಡಗೆ ' ಸಮಃ ಸಮವಿಭಕ್ತಾಂಗಃ " ಎಂದಂತೆ ಸಮಪರಿಮಾಣವನ್ನದು ಹೊಂದಿದೆ. ತಾಂಬೂಲವನ್ನಿಡುವ ಹೊನ್ನಪಡಿಗದ ಆಕಾರವನ್ನದು ಹೊಂದಿ ಚೆಲುವಾಗಿದೆ. ಮಂಡಿಗಳ ಕಾಂತಿ ಮೊಣಕಾಲಿನ ಸೌಂದರ್ಯವನ್ನು ದ್ವಿಗುಣಗೊಳಿಸಿದೆ. ಈ ಸುಕುಮಾರವಾದ ಮೊಣಕಾಲುಗಳನ್ನು ಸಂದರ್ಶಿಸಿದಾಗ ಲೋಕನಾಥನಾದ ಭಗವಂತನು ಭಕ್ತಪರಾಧೀನನಾಗಿ ನಡೆಸಿದ ಸೌಲಭ್ಯಪೂರ್ಣವಾದ ದಿವ್ಯಚೇಷ್ಟಿತಗಳ ನೆನಪಾಗುವುದು. ಭಗವಂತನ ಪಾದಾರವಿಂದವನ್ನೂ ಜಂಘೆಯನ್ನೂ ಸಂದರ್ಶಿಸಿದಮೇಲೆ ಜನನ ಮಾರ್ಗದಲ್ಲಿ ನಮ್ಮ ಓಟ ಕುಂಠಿತವಾಗುತ್ತದೆ ಎಂದರೆ ನಾನಾಜನ್ಮಕ್ಕೆ ಕಾರಣವಾದ ನಮ್ಮ ಪಾಪಸಂಚಯವೆಲ್ಲ ನಾಶವಾಗಿ ಮುಕ್ತರಾಗುತ್ತೇವೆ ಎಂಬ ಭಾವ. ಭಗವತ್ಸಂದರ್ಶನದಿಂದ—

ಆಪೀಠಾನ್ಮೌಳಿಪರ್ಯಂತಂ ಪಶ್ಯತಃ ಪುರುಷೋತ್ತಮಂ ।
ಪಾತಕಾನ್ಯಾಶು ನಶ್ಯಂತಿ ಕಿಂಪುನಸ್ತೂಪಪಾತಕಮ್ ॥

ಎಂದು ಹೇಳಿದಂತೆ ಪಾಪರಾಶಿಯೆಲ್ಲವೂ ಅಗ್ನಿಸಂಸ್ಪರ್ಶವಾದ ಹತ್ತಿಯ ರಾಶಿಯಂತೆ ದಗ್ಧವಾಗಿ ಆ ಚೇತನನು ಮುಮುಕ್ಷುವಾಗಿ ಭಗವಂತನ ಸಾಕ್ಷಾತ್ಕಾರವನ್ನು ಪಡೆಯುತ್ತಾನೆ.

ಕಾಮಾರಾಮಸ್ಥಿರಕದಳಿಕಾಸ್ತಮ್ಭಸಂಭಾವನೀಯಂ
ಕ್ಷೌಮಾಶ್ಲಿಷ್ಟಂ ಕಿಮಪಿ ಕಮಲಾಭೂಮಿನೀಳೋಪಧಾನಮ್ ।
ನ್ಯಂಚತ್ಕಾಂಚೀಕಿರಣರುಚಿರಂ ನಿರ್ವಿಶತ್ಯೂರುಯುಗ್ಮಂ
ಲಾವಣ್ಯೌಘದ್ವಯಮಿವ ಮತಿರ್ಮಾಮಿಕಾ ರಂಗಯೂನಃ ॥ ೪ ॥

(ಕಾಮಾರಾಮಸ್ಥಿರಕದಳಿಕಾಸ್ತಮ್ಭಸಂಭಾವನೀಯಂ) ಮನ್ಮಥನ ಉದ್ಯಾನದಲ್ಲಿನ ದೃಢವಾದ ಬಾಳೆಯ ಕಂಭಗಳೋ ಎಂದು ಆದರಿಸಲು ಯೋಗ್ಯವಾದವೂ, (ಕ್ಷೌಮಾಶ್ಲಿಷ್ಟಂ) ಉತ್ತಮವಾದ ಪೀತಾಂಬರವನ್ನು ಧರಿಸಿರುವುದೂ (ಕಿಮಪಿಕಮಲಾಭೂಮಿನೀಳೋಪಧಾನಮ್) ಶ್ರೀದೇವಿ ಭೂದೇವಿ ನೀಳಾದೇವಿಯರಿಗೆ ತಲೆದಿಂಬಾಗಿ ಅನಿರ್ವಚನೀಯವಾದ ಸೌಂದರ್ಯವನ್ನುಳ್ಳದೂ, (ಸ್ವಂಚತ್ಕಾಂಚೀಕಿರಣರುಚಿರಂ) ಕಿಂಕಿಣಿನಾದವನ್ನುಮಾಡುವ ಗೆಜ್ಜೆಡಾಬಿನ ರತ್ನಕಾಂತಿಗಳಿಂದ ಮನೋಹರವಾದುದೂ (ಲಾವಣ್ಯೌಘದ್ವಯಮಿವ) ಸೌಂದರ್ಯದ ಎರಡು ಪ್ರವಾಹಗಳೋ ಎಂಬಂತಿರುವುವೂ ಆದ(ರಂಗಭರ್ತುಃ ಊರುಯುಗ್ಮಂ) ಶ್ರೀರಂಗನಾಥನ ಎರಡು ತೊಡೆಗಳನ್ನು (ಮಾಮಿಕಾಮತಿಃ) ನನ್ನ ಬುದ್ಧಿಯು (ನಿರ್ವಿಶತಿ) ಅನುಭವಿಸುತ್ತಲಿದೆ.

ಈ ಶ್ಲೋಕದಲ್ಲಿ ಭಗವಂತನ ತೊಡೆಗಳೆರಡರ ದಿವ್ಯ ಸೌಂದರ್ಯ ವರ್ಣಿತವಾಗಿದೆ. ಜಂಘೆಗಳ ಸೌಂದರ್ಯವನ್ನನುಭವಿಸಿ ಧ್ಯಾನಿಸಿದಮೇಲೆ ಆರೋಹಕ್ರಮದಲ್ಲಿ ಮುಂದುವರಿದ ನಮ್ಮ ದೃಷ್ಟಿ ಅತನ ಊರುಯುಗ್ಮದಲ್ಲಿ ಲಗ್ನವಾಗುವುದು. ಶ್ರೀದೇವಿ ಭೂದೇವಿಯರಿಗೂ ನೀಳಾದೇವಿಗೂ ತಲೆದಿಂಬಾದುದು ಅದು. ಅದರ ಸೌಂದರ್ಯವನ್ನು ವರ್ಣಿಸಲಸದಳ. ರತ್ನಖಚಿತವಾದ ನಡುಪಟ್ಟಿಯ ಕಾಂತಿಗಳಿಂದ ಆ ಊರುಯುಗ್ಮ ಚೆಲುವಾಗಿದೆ. ನಾವು ಅನನ್ಯಭಾವದಿಂದ ಭಗವಂತನ ಊರುಯುಗ್ಮವನ್ನು ಧ್ಯಾನಿಸುವೆವು ಎಂಬ ಭಾವ ಇಲ್ಲಿದೆ.

ಸಂಪ್ರೀಣಾತಿ ಪ್ರತಿಕಲಮಸೌ ಮಾನಸಂ ಮೇ ಸುಜಾತಾ
ಗಂಭೀರತ್ವಾತ್ಕ್ವಚನ ಸಮಯೇ ಗೂಢನಿಕ್ಷಿಪ್ತವಿಶ್ವಾ ।
ನಾಳೀಕೇನ ಸ್ಫುರಿತರಜಸಾ ವೇಧಸೋ ನಿರ್ಮಿಮಾಣಾ
ರಮ್ಯಾವರ್ತದ್ಯುತಿಸಹಚರೀ ರಂಗನಾಥಸ್ಯ ನಾಭಿಃ ॥ ೫ ॥

(ಸುಜಾತಾ) ಶ್ರೇಷ್ಠವಾದ ಉತ್ಪತ್ತಿಯನ್ನುಳ್ಳದೂ (ಗಂಭೀರತ್ವಾತ್) ಆಳವಾಗಿರುವ ಕಾರಣ (ಕ್ವಚನಸಮಯೇ) ಕೆಲವು ಸಮಯಗಳಲ್ಲಿ (ಗೂಢನಿಕ್ಷಿಪ್ತವಿಶ್ವಾ) ಚರಾಚರಾತ್ಮಕವಾದ ಜಗತ್ತನ್ನು ಗೂಢವಾಗಿಡುವುದೂ, (ಸ್ಫುರಿತರಜಸಾನಾಳೀಕೇನ) ಪ್ರಕಾಶಿಸುವ ಪರಾಗಗಳುಳ್ಳ ಕಮಲದಿಂದ (ವೇಧಸಃ)

ಬ್ರಹ್ಮರುಗಳನ್ನು (ನಿರ್ಮಿಮಾಣಾ) ಸೃಷ್ಟಿಮಾಡುತ್ತಿರುವುದೂ (ರಮ್ಯಾ) ಸುಂದರವಾದುದೂ, (ಆವರ್ತದ್ಯುತಿಸಹಚರೀ) ಸುಳಿಯ ಕಾಂತಿಯೆಂಬ ಸಖಿಯೊಡಗೂಡಿರುವುದೂ ಆದ (ರಂಗನಾಥಸ್ಯ ಅಸೌ ನಾಭಿಃ) ರಂಗನಾಥನ ಈ ಹೊಕ್ಕಳು (ಪ್ರತಿಕಲಂ) ಪ್ರತಿಕ್ಷಣದಲ್ಲಿಯೂ (ಮೇ ಮಾನಸಂ) ನನ್ನ ಮನಸ್ಸನ್ನು (ಸಂಪ್ರೀಣಾತಿ) ಸಂತಸಗೊಳಿಸುತ್ತದೆ.

ಈ ಶ್ಲೋಕದಲ್ಲಿ ಭಗವಂತನ ದಿವ್ಯವಾದ ನಾಭಿಕಮಲದ ವರ್ಣನೆಯಿದೆ. ಭಗವಂತನ ನಾಭಿಕಮಲವು ಸತ್ಕುಲಪ್ರಸೂತೆಯಾದ ಮಗಳಂತೆ. ಗಾಂಭೀರ್ಯವೆಂಬ ಗುಣವನ್ನು ಹೊಂದಿದ ಅವಳು ಸಮಯಕ್ಕಾಗುವುದೆಂದು ವಸ್ತುಗಳನ್ನು ಮುಚ್ಚಿಟ್ಟು ಯಜಮಾನನ ಮಾನವನ್ನು ಕಾಯುವಳು. ಹಾಗೆಯೇ ಭಗವಂತನ ನಾಭಿಯಲ್ಲಿ ಪ್ರಳಯಕಾಲದಲ್ಲಿ ಚರಾಚರಾತ್ಮಕವಾದ ಜಗತ್ತು ಮರೆಯಾಗಿರುವುದು. ರಜೋಗುಣ ತಲೆಯೆತ್ತಿದಾಗ ಆ ನಾಭಿಕಮಲವು ಸೃಷ್ಟಿಕರ್ತಾವಾದ ಬ್ರಹ್ಮದೇವನನ್ನು ಪಡೆಯುತ್ತದೆ. ಭಗವಂತನ ದಿವ್ಯಮಂಗಳ ವಿಗ್ರಹವೇ ಒಂದು ಸೌಂದರ್ಯಪ್ರವಾಹವಾದರೆ ಅದಕ್ಕೆ ನಾಭಿಕಮಲವು ನೀರು ಸುಳಿಯಂತಿರುವುದು. ಇಂಥ ಸುಂದರವಾದ ನಾಭಿಕಮಲವು ತನ್ನ ಸೌಂದರ್ಯದಿಂದ ನಮ್ಮನ್ನು ಪರವಶಗೊಳಿಸುತ್ತಿದೆ.

ಶ್ರೀವತ್ಸೇನ ಪ್ರಥಿತವಿಭವಂ ಶ್ರೀಪದನ್ಯಾಸಧನ್ಯಂ
ಮಧ್ಯಂ ಬಾಹ್ವೋರ್ಮಣಿವರರುಚಾ ರಂಜಿತಂ ರಂಗಧಾಮ್ನಃ ।
ಸಾಂದ್ರಚ್ಛಾಯಂ ತರುಣತುಲಸೀಚಿತ್ರಯಾ ವೈಜಯಂತ್ಯಾ
ಸಂತಾಪಂ ಮೇ ಶಮಯತಿ ಧಿಯಶ್ಚಂದ್ರಿಕೋದಾರಹಾರಮ್ ॥ ೬ ॥

(ಶ್ರೀವತ್ಸೇನ) ಶ್ರೀವತ್ಸವೆಂಬ ಮಚ್ಚೆಯಿಂದ (ಪ್ರಥಿತವಿಭವಂ) ಪ್ರಸಿದ್ಧವಾದ ಮಹಿಮೆಯುಳ್ಳದೂ, (ಶ್ರೀಪದನ್ಯಾಸಧನ್ಯಂ) ಶ್ರೀದೇವಿಯ ಪಾದಚಿಹ್ನೆಯಿಂದ ಶ್ರೇಷ್ಠವಾದುದೂ, (ಮಣಿವರ ರುಚಾರಂಜಿತಂ), ಅನರ್ಘವಾದ ಕೌಸ್ತುಭ ರತ್ನದ ಕಾಂತಿಯಿಂದ ಬೆಳಗುತ್ತಿರುವುದೂ, (ತರುಣತುಲಸೀ ಚಿತ್ರಯಾ ವೈಜಯಂತ್ಯಾ ಸಾಂದ್ರಚ್ಛಾಯಂ) ಎಳೆಯ ತುಳಸೀದಳಗಳೊಡನೆ ಕೂಡಿ ವಿವಿಧವಾದ ಬಣ್ಣವುಳ್ಳ ವೈಜಯಂತೀ ಎಂಬ ದಿವ್ಯಮಾಲೆಯಿಂದ ಘನವಾದ ಕಾಂತಿಯುಳ್ಳದೂ, (ಚಂದ್ರಿಕೋದಾರಹಾರಂ) ಬೆಳುದಿಂಗಳಿನಂತೆ

ಪ್ರಕಾಶಿಸುವ ಮುಕ್ತಾಹಾರವುಳ್ಳುದೂ, ಆದ (ರಂಗಧಾಮ್ನಃ ಬಾಹ್ವೋಃ ಮಧ್ಯಂ) ಶ್ರೀರಂಗನಾಥನ ವಕ್ಷಃಸ್ಥಳವು (ಮೇ) ನನ್ನ (ಧಿಯಃ) ಬುದ್ಧಿಯ (ಸಂತಾಪಂ) ಕ್ಲೇಶವನ್ನು (ಶಮಯತಿ) ಹೋಗಲಾಡಿಸುತ್ತಿದೆ.

ಈ ಶ್ಲೋಕದಲ್ಲಿ ಶ್ರೀರಂಗನಾಥನ ವಕ್ಷಃಸ್ಥಲದ ಧ್ಯಾನಕ್ರಮವನ್ನು ವರ್ಣಿಸಲಾಗಿದೆ. ಶ್ರೀವತ್ಸವೆಂಬ ಮಚ್ಚೆ ಮತ್ತೆಯಾರಿಗೂ ಇಲ್ಲದೆ ಶ್ರೀಮನ್ನಾರಾಯಣನಿಗೇ ಅಸಾಧಾರಣವಾದ ಗುರುತಾಗಿದೆ. 'ವೇದಾಂತಾಃ ತತ್ತ್ವಚಿಂತಾಂ ಮುರಭಿದುರಸಿಯತ್ಪಾದಚಿಹ್ನೈಃ ತರಂತಿ' ಎಂದು ಹೇಳಿರುವಂತೆ ಭಗವಂತನ ವಕ್ಷಃಸ್ಥಲದಲ್ಲಿರುವ ಲಕ್ಷ್ಮೀದೇವಿಯ ಪಾದಚಿಹ್ನೆಅವನ ಪರತ್ತ್ವವನ್ನು ತಿಳಿಸುವ ಗುರುತಾಗಿದೆ. ಇದರಿಂದಲೇ ಶ್ರೀಮನ್ನಾರಾಯಣನು ಪರಾತ್ಪರವಸ್ತುವೆಂಬುದನ್ನು ಶ್ರುತಿಗಳು ನಿಶ್ಚಯಿಸಿದವು. ಆ ಲಕ್ಷ್ಮೀದೇವಿಯ ನಿತ್ಯವಾಸಸ್ಥಳ ಭಗವಂತನ ವಕ್ಷಃಸ್ಥಲ. ಇದರಿಂದ ಭಗವಂತನಿಗೆ ಶ್ರೀದೇವಿಯೊಡನೆ ನಿತ್ಯಯೋಗವನ್ನು ತಿಳಿಸಲಾಯಿತು. ಸರ್ವದಾ ಜ್ವಲಿಸುತ್ತಿರುವ ಕೌಸ್ತುಭರತ್ನ ಆ ಲಕ್ಷ್ಮೀಗೃಹಕ್ಕೆ ಮಂಗಳದೀಪದಂತೆ ಬೆಳಗುತ್ತಿದೆ. ಇಂಥ ವಕ್ಷಃಸ್ಥಲದ ಧ್ಯಾನದಿಂದ ಭಕ್ತರ ಸಕಲಸಂತಾಪಗಳೂ ಪರಿಹಾರವಾಗುತ್ತವೆ. ಮನೋಹರವಾದುದೂ ಮಹಾಲಕ್ಷ್ಮಿಗೆ ಶಯನಗೃಹವಾದುದೂ ಆದ ಭಗವಂತನ ದಿವ್ಯವಕ್ಷಃಸ್ಥಲವನ್ನು ಧ್ಯಾನಿಸುತ್ತೇನೆಂಬುದು ಇದರ ಭಾವ.

ಏಕಂ ಲೀಲೋಪಹಿತಮಿತರಂ ಬಾಹುಮಾಜಾನುಲಂಬಂ
ಪ್ರಾಪ್ತಾ ರಂಗೇಶಯಿತುರಖಿಲಪ್ರಾರ್ಥನಾಪಾರಿಜಾತಂ ।
ದೃಪ್ತಾ ಸೇಯಂ ದೃಢನಿಯಮಿತಾ ರಶ್ಮಿಭಿರ್ಭೂಷಣಾನಾಂ
ಚಿಂತಾಹಸ್ತಿನ್ಯನುಭವತಿ ಮೇ ಚಿತ್ರಮಾಲಾನಯಂತ್ರಂ ॥ ೭ ॥

(ಲೀಲೋಪಹಿತಂ) ಲೀಲೆಯಿಂದ ತಲೆದಿಂಬಾಗಿ ಮಾಡಲ್ಪಟ್ಟಿರುವ (ಏಕಂ ಬಾಹುಂ) ಒಂದು ತೋಳನ್ನೂ (ರಂಗೇಶಯಿತುಃ) ಶ್ರೀರಂಗದಲ್ಲಿ ಪವಡಿಸಿರುವ ಶ್ರೀ ರಂಗನಾಥನ (ಆಜಾನುಲಂಬಂ) ಮಂಡಿಯವರೆಗೂ ನೀಡಿಕೊಂಡಿರುವ (ಅಖಿಲಪ್ರಾರ್ಥನಾಪಾರಿಜಾತಂ ಇತರಂ) ಎಲ್ಲ ಇಷ್ಟಾರ್ಥಗಳನ್ನೂ ನೀಡುವ ಕಲ್ಪವೃಕ್ಷವಾದ ಮತ್ತೊಂದು ತೋಳನ್ನೂ(ಪ್ರಾಪ್ತಾ) ಹೊಂದಿದುದಾಗಿ(ಮೇ) ನನ್ನ (ದೃಪ್ತಾ) ಗರ್ವಿತವಾದ (ಸಾ ಇಯಂ ಚಿಂತಾ ಹಸ್ತಿನಿ) ಈ ಧ್ಯಾನರೂಪ

ವಾದ ಚಿಂತೆ ಎಂಬ ಹೆಣ್ಣಾನೆಯು (ಭೂಷಣಾನಾಂ ರಶ್ಮಿಭಿಃ ದೃಢನಿಯಮಿತಾ) ರಂಗನಾಥನ ಆಭರಣಗಳ ಕಾಂತಿಗಳೆಂಬ ಹಗ್ಗಗಳಿಂದ ಬಲವಾಗಿ ಕಟ್ಟಲ್ಪಟ್ಟದ್ದಾಗಿ (ಆಲಾನಯಂತ್ರಂ ಅನುಭವತಿ) ಆನೆಕಟ್ಟುವ ಕಂಭದಲ್ಲಿ ಕಟ್ಟಿಸಿಕೊಳ್ಳುವುದನ್ನು ಅನುಭವಿಸುತ್ತಿದೆ! (ಚಿತ್ರಂ) ಇದು ಪರಮಾಶ್ಚರ್ಯ !!

ಕ್ಷೀರಾಬ್ಧಿಶಾಯಿಯಾದ ಭಗವಂತನು ಲೋಕಸಂರಕ್ಷಣದಲ್ಲಿ ಜಾಗರೂಕನಾಗಿದ್ದರೂ ಯೋಗನಿದ್ರಾಪರವಶನಾಗಿದ್ದಾನೆ. ಹೀಗೆ ಪವಡಿಸಿರುವ ಶ್ರೀರಂಗನಾಥನ ಎರಡೂ ತೋಳುಗಳ ಸೌಂದರ್ಯವನ್ನು ಈ ಶ್ಲೋಕದಲ್ಲಿ ಆಚಾರ್ಯರು ಅನುಭವಿಸಿದ್ದಾರೆ. ಭಗವಂತನ ಒಂದು ತೋಳು ತಲೆದಿಂಬಾಗಿದೆ. ಮತ್ತೊಂದು ತೋಳು ಮಂಡಿಯವರೆಗೂ ನೀಡಿದೆ. ನಮ್ಮ ಸಕಲಾಭೀಷ್ಟಗಳನ್ನು ಕರುಣಿಸುವ ಭಾಗ್ಯಹಸ್ತ ಇದು. ಈ ಬಾಹುವನ್ನಲಂಕರಿಸಿರುವ ಆಭರಣಗಳ ಕಾಂತಿಯೇ ಹಗ್ಗವಾಗಿ ನಮ್ಮ ಚಿಂತೆ ಎಂಬ ಹೆಣ್ಣಾನೆಯನ್ನು ಕಟ್ಟಿಹಾಕುತ್ತದೆ. ನಮ್ಮ ಚಿಂತೆ ಚಂಚಲವಾಗದೆ ಕಂಭಕ್ಕೆ ಕಟ್ಟಿಹಾಕಿದಂತೆ ಸ್ತಬ್ಧವಾಗುತ್ತದೆ ರಂಗನಾಥನ ಇಷ್ಟಾರ್ಥಪ್ರದವಾದ ಬಾಹುವಿನ ದರ್ಶನದಿಂದ. ಭಗವಂತನ ದಿವ್ಯಾವಯವ ದರ್ಶನದಿಂದ ಉಂಟಾದ ಆನಂದವೆಂಬುದೇ ಆನೆಗೆ ಉಂಟಾಗುವ ಮದ. ಇಲ್ಲಿ ಆಶ್ಚರ್ಯಕ್ಕೇನುಕಾರಣ ಎಂದರೆ ಚಿಂತೆ ಎಂಬ ಹೆಣ್ಣಾನೆಗೆ ಮದವುಂಟಾಯಿತೆಂಬುದು ಒಂದು. ದಪ್ಪವಾದ ಹಗ್ಗಗಳಿಂದ ಕಟ್ಟಿಹಾಕಿದರೂ ಕಿತ್ತುಕೊಳ್ಳುವ ಸ್ವಭಾವ ಆನೆಯದು. ಆದರೆ ಭಗವಂತನ ದಿವ್ಯಾಭರಣಗಳ ಕಾಂತಿ-ಕಿರಣಗಳಿಂದ ಕಟ್ಟಲ್ಪಟ್ಟಾಗ ಕೀಳಲಸಾಧ್ಯವಾಗದಂತೆ ಅದು ಸ್ತಬ್ಧವಾಗಿಹೋಗಿರುವುದು ಇನ್ನೊಂದು ಆಶ್ಚರ್ಯ. ಶ್ರೀರಂಗನಾಥನ ತೋಳುಗಳ ಸೌಂದರ್ಯ ಸರ್ವಾತಿಶಾಯಿಯಾಗಿ ಎಲ್ಲರ ಚಿತ್ತವನ್ನೂ ಆಕರ್ಷಿಸಿ ನಿಲ್ಲಿಸುತ್ತದೆ ಎಂದು ಇದರ ಭಾವ.

ಸಾಭಿಪ್ರಾಯಸ್ಮಿತವಿಕಸಿತಂ ಚಾರುಬಿಂಬಾಧರೋಷ್ಠಂ
ದುಃಖಾಪಾಯಪ್ರಣಯಿನಿ ಜನೇ ದೂರದತ್ತಾಭಿಮುಖ್ಯಂ ।
ಕಾಂತಂ ವಕ್ತ್ರಂ ಕನಕತಿಲಕಾಲಂಕೃತಂ ರಂಗಭರ್ತುಃ
ಸ್ವಾಂತೇ ಗಾಢಂ ವಿಲಗತಿ ಮಮ ಸ್ವಾಗತೋದಾರನೇತ್ರಂ ॥ ೮ ॥

(ಸಾಭಿಪ್ರಾಯಸ್ಮಿತವಿಕಸಿತಂ) ಅಭಿಪ್ರಾಯದೊಡನೆ ಕೂಡಿದ ಮುಗುಳುನಗೆಯಿಂದ ಅರಳಿದುದೂ, (ಚಾರುಬಿಂಬಾಧರೋಷ್ಠಂ) ಮನೋಹರವಾಗಿ

ತೊಂಡೆಯ ಹಣ್ಣಿನಂತಿರುವ ಕೆಳದುಟಿಯಿಂದ ಚೆಲುವಾದುದೂ, (ದುಃಖಾಪಾಯಪ್ರಣಯಿನಿ ಜನೇ) ದುಃಖಗಳನ್ನು ಕಳೆದುಕೊಳ್ಳಲಿಚ್ಛಿಸುವ ಜನರಲ್ಲಿ (ದೂರದತ್ತಾಭಿಮುಖ್ಯಂ) ದೂರದಿಂದಲೇ ಪ್ರಸನ್ನತೆಯನ್ನು ತೋರುವುದೂ, (ಕಾಂತಂ) ಸುಂದರವಾದುದೂ, (ಕನಕತಿಲಕಾಲಂಕೃತಂ) ಭಂಗಾರದ ತಿಲಕದಿಂದ ಅಲಂಕೃತವಾದುದೂ, (ಸ್ವಾಗತೋದಾರನೇತ್ರಂ) ಸುಖಾಗಮನವನ್ನು ಕೇಳುವುದೋ ಎಂಬಂತೆ ಪ್ರಸನ್ನವಾದ ಕಣ್ಣುಗಳನ್ನುಳ್ಳುದೂ, ಆದ (ರಂಗಭರ್ತುಃ ವಕ್ತ್ರಂ) ಶ್ರೀರಂಗನಾಥನ ಮುಖಮಂಡಲವು (ಮಮಸ್ವಾಂತೇ) ನನ್ನ ಮನಸ್ಸಿನಲ್ಲಿ (ಗಾಢಂ) ದೃಢವಾಗಿ (ವಿಲಗತಿ) ಸಂಬಂಧಿಸುತ್ತದೆ.

ಭಗವಂತನ ಮುಖಚಂದ್ರಮನ ಸೌಂದರ್ಯವನ್ನು ಇಲ್ಲಿ ವರ್ಣಿಸಿದ್ದಾರೆ. ಭಗವಂತನ ಮುಖ ಅರಳಿದ ಕಮಲದಂತೆ ಇದೆ ಮುಗುಳುನಗೆಯಿಂದ ಕೂಡಿ. ಲೋಕದ ವಿಷಯಾಸಕ್ತಿಗಳಲ್ಲಿ ವೈರಾಗ್ಯವನ್ನು ಹೊಂದಿ ತನ್ನಲ್ಲಿ ಪ್ರೀತಿರೂಪವಾದ ಭಕ್ತಿಯನ್ನುಮಾಡಿ ತನ್ನದರ್ಶನಕ್ಕಾಗಿ ಬಂದಿರುವವರು 'ಸ ಮಹಾತ್ಮಾ ಸುದುರ್ಲಭಃ' ಎಂಬಂತೆ ತನಗೆ ದುರ್ಲಭರಾದ ಕಾರಣದಿಂದಲೂ 'ಉದಾರಾಸ್ಸರ್ವಏವೈತೇ ಜ್ಞಾನೀತ್ವಾತ್ಮೈವಮೇಮತಂ' ಎಂಬಂತೆ ತನಗೆ ಬಹಳ ಪ್ರಿಯರಾದ ಕಾರಣದಿಂದಲೂ ಭಗವಂತನು ತನ್ನ ಮನಸ್ಸಿನಲ್ಲುಂಟಾದ ಸಂತೋಷವನ್ನಡಗಿಸಿಕೊಂಡು ಮುಗುಳುನಗೆಯಿಂದ ಕೂಡಿದ್ದಾನೆ. ಇದು ಸಾಭಿಪ್ರಾಯಸ್ಮಿತ. ತಾಪತ್ರಯಾಭಿಹತರಾದ ಭಕ್ತಜನರ ವಿಷಯದಲ್ಲಿ ದೂರದಿಂದಲೇ ಭಗವಂತನು ತನ್ನ ಪ್ರಸನ್ನತೆಯನ್ನು ತೋರುತ್ತಾನೆ. ಕರುಣಾ ಕಟಾಕ್ಷವನ್ನು ಬೀರುತ್ತಾನೆ. ಸ್ವಾಗತೋದಾರನೇತ್ರಂ ಎಂಬುವುದರಿಂದ ತನ್ನ ಬಳಿಗೆ ಬಂದ ಚೇತನರನ್ನು ಕ್ಷೇಮವಾಗಿ ಬಂದಿರಾ ಎಂದು ಸುಖಾಗಮನ ಪ್ರಶ್ನೆಯನ್ನು ಮಾಡುವಂತೆ ತನ್ನ ಕಟಾಕ್ಷವನ್ನು ಬೀರುತ್ತಾನೆಂಬ ಅರ್ಥಬರುತ್ತದೆ. ಅನಾದಿಕಾಲದಿಂದ ವಿಪರೀತಾನುಷ್ಠಾನಮಾಡುತ್ತಿರುವ ಕಾರಣ ಭಗವಂತನ ಬಳಿಗೆ ಹೇಗೆ ಬರುವುದೆಂದು ಅಂಜುವವರಿಗೆ ಧೈರ್ಯವನ್ನು ಹೇಳುವಂತೆ ತನ್ನ ಕ್ಷಮಾಗುಣವನ್ನೂ, ಅನುಗ್ರಹವನ್ನೂ ಸೂಸುವ ನೇತ್ರಗಳುಳ್ಳವನು ಎಂದಾಗುತ್ತದೆ. ಭಗವಂತನ ಅಪಾರವಾದ ದಯಾಗುಣವನ್ನೂ ರಕ್ಷಕತ್ವವನ್ನೂ ಈ ಶ್ಲೋಕದಲ್ಲಿ ಹೇಳಿದೆ. ಸೌಲಭ್ಯ ಸೌಶೀಲ್ಯಾದಿಗುಣವಿಶಿಷ್ಟನಾದ ಪರಮಾತ್ಮನ ಅನುಗ್ರಹಸೂಚಕವಾದ ನೇತ್ರಭಾವವುಳ್ಳುದೂ, ಸೌಂದ

ರ್ಯದ ಖನಿಯಾದುದೂ ಆದ ವದನಾರವಿಂದವು ನನ್ನ ಧ್ಯಾನಕ್ಕೆ ವಿಷಯವಾಗಿದೆ ಎಂಬುದು ಇದರ ಭಾವ.

ಮಾಲ್ಯೈರಂತಸ್ಥಿರಪರಿಮಳೈಃ ವಲ್ಲಭಾಸ್ಪರ್ಶಮಾನ್ಯೈಃ
ಕುಪ್ಯಜ್ಜೋಳೀವಚನಕುಟಿಲೈಃ ಕುಂತಲೈಃ ಶ್ಲಿಷ್ಟಮೂಲೇ ।
ರತ್ನಾಪೀಡದ್ಯುತಿಶಬಲಿತೇ ರಂಗಭರ್ತುಃ ಕಿರೀಟೇ
ರಾಜನ್ವತ್ಯಃ ಸ್ಥಿತಿಮಧಿಗತಾಃ ವೃತ್ತಯಶ್ಚೇತಸೋ ಮೇ ॥ ೯ ॥

(ವಲ್ಲಭಾಸ್ಪರ್ಶಮಾನ್ಯೈಃ) ಪ್ರಿಯಪತ್ನಿಯರಾದ ಭೂನೀಳಾದೇವಿಯರ ಕರಸ್ಪರ್ಶದಿಂದ ಬಹುಮಾನಯೋಗ್ಯವಾದ (ಮಾಲ್ಯೈಃ) ಪುಷ್ಪಮಾಲಿಕೆಗಳಿಂದ (ಅಂತಃ ಸ್ಥಿರಪರಿಮಳೈಃ) ಒಳಗೆ ಸ್ಥಿರವಾದ ಸುಗಂಧವುಳ್ಳುದಾಗಿ (ಕುಪ್ಯಜ್ಜೋಳೀವಚನಕುಟಿಲೈಃ) ಪ್ರಣಯಕುಪಿತರಾದ ಚೋಳಸ್ತ್ರೀಯರ ಕೊಂಕು ಮಾತಿನಂತೆ ಸುರುಳಿಸುತ್ತಿಕೊಂಡಿರುವ (ಕುಂತಲೈಃ) ಮುಂಗುರುಳುಗಳಿಂದ (ಶ್ಲಿಷ್ಟಮೂಲೇ) ಕೂಡಿದ ಮೂಲಭಾಗವುಳ್ಳ, (ರತ್ನಾಪೀಡದ್ಯುತಿಶಬಲಿತೇ) ರತ್ನಮಯವಾದ ಶಿರೋಭೂಷಣಗಳ ವಿವಿಧ ಕಾಂತಿಗಳಿಂದ ಸುಶೋಭಿತವಾದ (ರಂಗಭರ್ತುಃಕಿರೀಟೇ) ಶ್ರೀರಂಗರಾಜನ ಕಿರೀಟದಲ್ಲಿ (ಮೇ ಚೇತಸಃ ವೃತ್ತಯಃ) ನನ್ನಮನಸ್ಸಿನ ವ್ಯಾಪಾರಗಳು (ರಾಜನ್ವತ್ಯಃ) ಅಧಿನಾಯಕನನ್ನು ಹೊಂದಿದವುಗಳಾಗಿ (ಸ್ಥಿತಿಂ ಅಧಿಗತಾಃ) ರಕ್ಷಣೆಯನ್ನು ಪಡೆದವು.

ಸ್ವಾಮಿಯ ಸರ್ವೇಶ್ವರತ್ವವನ್ನು ಸೂಚಿಸುವ ಕಿರೀಟವನ್ನಿಲ್ಲಿ ಧ್ಯಾನಿಸಲಾಗಿದೆ. ಭಗವಂತನ ದಿವ್ಯಶಿರಸ್ಸಿಗೆ ಈ ಕಿರೀಟ ಆಭರಣವಾಗಿದೆ. ಹೊರಗೆ ಕಂಡೂಕಾಣದಂತೆ ಸುಳಿದಾಡುವ ಮುಂಗುರುಳುಗಳಿಂದ ಸ್ಪಷ್ಟವಾಗಿ ಚೆಲುವಾಗಿದೆ. ವಲ್ಲಭೆಯರಾದ ಶ್ರೀದೇವಿ ಗೋದಾದೇವಿಯರು ಧರಿಸಿ ವರಣಮಾಲಿಕೆಯಾಗಿ ಸಮರ್ಪಿಸಿದ ದಿವ್ಯವಾದ ಪುಷ್ಪಮಾಲಿಕೆಗಳ ನರುಗಂಪು ಕುಟಿಲ ಕುಂತಳಗಳಲ್ಲಿ ಹೊರಸೂಸುತ್ತಿದೆ. ತನ್ನ ವಲ್ಲಭೆಯರು ಧರಿಸಿ ಸಮರ್ಪಿಸಿದ ಕಾರಣ ಆ ಪುಷ್ಪಮಾಲಿಕೆಗಳು ಮಾನ್ಯವಾಗಿವೆ ಅವನಿಗೆ. ಕಿರೀಟದ ಆದಿಭಾಗದಲ್ಲಿ ಸೇರಿ ಸುಳಿದಾಡುವ ಮುಂಗುರುಳುಗಳು ಚೆಲುವಾಗಿವೆ. ಕುಪಿತರಾದ ಚೋಳಕಾಂತೆಯರ ಕೊಂಕುಮಾತಿನಂತೆ ಈ ಮುಂಗುರುಳುಗಳು ಕುಟಿಲವಾಗಿವೆ. ಭಗವಂತನ ದಿವ್ಯರತ್ನಕಿರೀಟ ತನ್ನ ರತ್ನಪ್ರಭೆಯನ್ನು

ಎಲ್ಲೆಡೆ ಚೆಲ್ಲುತ್ತಿದೆ. ಭಗವಂತನ ಇಂಥ ರತ್ನಮಯಕಿರೀಟವನ್ನು ಇಲ್ಲಿ ಧ್ಯಾನಪೂರ್ವಕ ಸ್ತುತಿಸಿದ್ದಾರೆ.

ಪಾದಾಂಭೋಜಂ ಸ್ಪೃಶತಿ ಭಜತೇ ರಂಗನಾಥಸ್ಯ ಜಂಘಾಂ
ಊರುದ್ವಂದ್ವೇ ವಿಲಗತಿ ಶನೈಃ ಊರ್ಧ್ವಮಭ್ಯೇತಿ ನಾಭಿಂ ।
ವಕ್ಷಸ್ಯಾಸ್ತೇ ವಲತಿ ಭುಜಯೋರ್ಮಾಮಿಕೇಯಂ ಮನೀಷಾ
ವಕ್ತ್ರಾಭಿಖ್ಯಾಂ ಪಿಬತಿ ವಹತೇ ವಾಸನಾಂ ಮೌಳಿಬಂಧೇ ॥ ೧೦ ॥

(ಮಾಮಿಕಾ ಇಯಂ ಮನೀಷಾ) ನನ್ನ ಈ ಬುದ್ಧಿಯು (ರಂಗನಾಥಸ್ಯ) ಶ್ರೀರಂಗನಾಥನ (ಪಾದಾಂಭೋಜಂಸ್ಪೃಶತಿ) ಪಾದಪದ್ಮವನ್ನುಸ್ಪರ್ಶಿಸುತ್ತದೆ; (ಜಂಘಾಂಭಜತೇ) ಅನಂತರ ಮೊಣಕಾಲನ್ನು ಸೇರುತ್ತದೆ; (ಊರುದ್ವಂದ್ವೇ ವಿಲಗತಿ) ತೊಡೆಗಳೆರಡರಲ್ಲಿ ವಿಶೇಷವಾಗಿ ಲಗ್ನವಾಗುತ್ತದೆ; (ಊರ್ಧ್ವಂ) ಅದರಮೇಲೆ (ಶನೈಃ) ಮೆಲ್ಲಮೆಲ್ಲಗೆ (ನಾಭಿಂಅಭ್ಯೇತಿ) ಹೊಕ್ಕಳನ್ನು ಕುರಿತು ಅಭಿಮುಖವಾಗಿ ಹೋಗುತ್ತದೆ; (ವಕ್ಷಸಿ ಆಸ್ತೇ) ಅನಂತರ ವಕ್ಷಃಸ್ಥಲದಲ್ಲಿ ನೆಲಸುತ್ತದೆ; (ಭುಜಯೋಃ ವಲತಿ) ತೋಳುಗಳಲ್ಲಿ ಸುತ್ತುತ್ತದೆ; (ವಕ್ತ್ರಾಭಿಖ್ಯಾಂಪಿಬತಿ) ಮುಖಮಂಡಲದ ಕಾಂತಿಯನ್ನು ಕುಡಿಯುತ್ತದೆ; (ಮೌಳಿಬಂಧೇ ವಾಸನಾಂ ವಹತೇ) ಕಿರೀಟದಲ್ಲಿ ಪರಿಮಳವನ್ನು ವಹಿಸುತ್ತಿದೆ.

ಈ ಶ್ಲೋಕದಲ್ಲಿ ಭಗವಂತನ ದಿವ್ಯಸೌಂದರ್ಯವನ್ನು ಪಾದದಿಂದ ಮೌಳಿಯವರೆಗೂ ಒಟ್ಟಾಗಿ ಅನುಸಂಧಾನಮಾಡಿದ್ದಾರೆ. ಶ್ರೀರಂಗನಾಥನ ಪಾದಾರವಿಂದಗಳ ಸೌಂದರ್ಯವನ್ನನುಭವಿಸಿ ಆರೋಹಕ್ರಮದಿಂದ ಮೆಲ್ಲ ಮೆಲ್ಲನೆ ಮುಂದಡಿಯಿಡುತ್ತಾ ನಮ್ಮ ಬುದ್ಧಿ ಆ ದೇವದೇವನ ಮೊಣಕಾಲು ಮಂಡಿಗಳ ಸೌಂದರ್ಯವನ್ನು ಸವಿದು ಮುಂದೆ ತೊಡೆಗಳ ಸೌಂದರ್ಯಾನುಭವದಲ್ಲಿ ತಲ್ಲೀನವಾಗುತ್ತದೆ ಅನಂತರ ಮುಂದುವರಿದು ಶ್ರೀದೇವಿಗೆ ನೆಲೆಮನೆಯಾಗಿರುವ ಶ್ರೀರಂಗರಾಜನ ವಕ್ಷಃಸ್ಥಲದಲ್ಲಿ ಕುಳಿತು ಸ್ವಲ್ಪಹೊತ್ತು ದಣಿವಾರಿಸಿಕೊಂಡು ಮುಂದೆ ಆತನ ಬಾಹುದ್ವಂದ್ವದಲ್ಲಿ ಸಂಚರಿಸುವುದು. ತದನಂತರ ಬಾಯಾರಿದ ಆ ಬುದ್ಧಿ ಭಗವಂತನ ಮುಖಕಾಂತಿಯೆಂಬ ಅಮೃತಪಾನವನ್ನು ಮಾಡಿ ಧನ್ಯವಾಗುವುದು. ಮುಂದೆ ಶ್ರೀರಂಗರಾಜನ ಸರ್ವೇಶ್ವರತ್ವಸೂಚಕವಾದ ದಿವ್ಯಕಿರೀಟವನ್ನು ಸೇರುವುದು. ಗೋದಾದೇವಿಯು

ಸಮರ್ಪಿಸಿದ ಕುಸುಮಮಾಲೆಗಳನ್ನು ಆದರದಿಂದ ರಂಗನಾಥನು ತನ್ನ ಕಿರೀಟದಲ್ಲಿ ಧರಿಸುವುದರಿಂದ ಆ ಪುಷ್ಪಮಾಲಿಕೆಗಳ ಪರಿಮಳವನ್ನು ನಮ್ಮ ಬುದ್ಧಿ ವಹಿಸುತ್ತದೆ. ವಾಸನಾ ಎಂಬ ಶಬ್ದಕ್ಕೆ ಪರಿಮಳವೆಂದೂ ಸ್ಮರಣ ಹೇತುವಾದ ಭಾವನೆ ಎಂದೂ ಅರ್ಥವುಂಟು. ಆದರಿಂದ ನಮ್ಮ ಬುದ್ಧಿ ಭಗವಂತನ ಕಿರೀಟವನ್ನು ಸೇರಿ ಸ್ಮರಣಕ್ಕೆ ಕಾರಣವಾದ ಸಂಸ್ಕಾರವನ್ನೂ ಭಾವನೆ ಎಂಬ ಪರಿಮಳವನ್ನೂ ಹೊಂದುತ್ತದೆ ಎಂಬ ಭಾವ ಇಲ್ಲಿದೆ. ಬುದ್ಧಿ ಎಂಬುದು ಸ್ತ್ರೀಲಿಂಗ ಶಬ್ದವಾದ ಕಾರಣ ನಾಯಿಕಾಭಾವವನ್ನು ಹೊಂದಿದು ದಾಗಿದೆ. ನನ್ನ ಬುದ್ಧಿ ಶ್ರೀರಂಗನಾಥನ ದಿವ್ಯಾವಯವಗಳ ಸೌಂದರ್ಯದ ಅನು ಭವವನ್ನು ಹೊಂದಿ ಮಹದಾನಂದವನ್ನು ಹೊಂದಿತೆಂಬ ಭಾವ ಧ್ವನಿತವಾಗಿದೆ.

ಕಾಂತೋದಾರೈರಯಮಿಹ ಭುಜೈಃ ಕಂಕಣಜ್ಯಾಕಿಣಾಂಕೈಃ
ಲಕ್ಷ್ಮೀಧಾಮ್ನಃ ಪೃಥುಲಪರಿಘೈರ್ಲಕ್ಷಿತಾಭೀತಿಹೇತಿಃ ।
ಅಗ್ರೇ ಕಿಂಚಿದ್ಭುಜಗಶಯನಸ್ಸ್ವಾತ್ಮನೈವಾತ್ಮನಸ್ಸನ್
ಮಧ್ಯೇ ರಂಗಂ ಮಮ ಚ ಹೃದಯೇ ವರ್ತತೇ ಸಾವರೋಧಃ ॥ ೧೧ ॥

(ಅಯಂ ಭುಜಗಶಯನಃ) ಈಶೇಷಶಾಯಿಯು (ಕಾಂತೋದಾರೈಃ) ಮನೋ ಹರವೂ, ಸರ್ವಾಭೀಷ್ಟಪ್ರದವೂ, (ಕಂಕಣಜ್ಯಾಕಿಣಾಂಕೈಃ) ಬಳೆಗಳು ಹಾಗೂ ಶಾರ್ಙ್ಗವೆಂಬ ಬಿಲ್ಲಿನ ಹೆದೆ ಇವುಗಳಿಂದ ಗೆರೆಗೆರೆಯಾದ ಗುರುತುಳ್ಳವೂ, (ಲಕ್ಷ್ಮೀಧಾಮ್ನಃ ಪೃಥುಲಪರಿಘೈಃ) ಶ್ರೀದೇವಿಯ ವಾಸಸ್ಥಳವಾದ ತನ್ನ ವಕ್ಷಃಸ್ಥಲಕ್ಕೆ ದಪ್ಪವಾಗಿಯೂ ಉದ್ದವಾಗಿಯೂ ಇರುವ ತಾಳುಮುಂಡಿಗೆ ಗಳಂತಿರುವುವೂ ಆದ (ಭುಜೈಃ) ತನ್ನ ಭುಜಗಳಿಂದ (ಲಕ್ಷಿತಾಭೀತಿಹೇತಿಃ) ಅಭಯವನ್ನೂ ಹಾಗೆಯೇ ದಿವ್ಯಾಯುಧಗಳನ್ನೂ ತೋರುವವನಾಗಿ (ಆತ್ಮನಃ ಕಿಂಚಿದಗ್ರೇ) ತನಗೆ ಸ್ವಲ್ಪ ಮುಂಭಾಗದಲ್ಲಿ ಇರುವ (ಇಹ) ಈ ಉತ್ಸವ ಮೂರ್ತಿಯಲ್ಲಿಯೂ, (ಮಧ್ಯೇರಂಗಂ) ಶ್ರೀರಂಗಕ್ಷೇತ್ರದ ಮಧ್ಯದಲ್ಲಿಯೂ (ಮಮಹೃದಯೇ ಚ) ನನ್ನ ಹೃದಯಮಂದಿರದಲ್ಲಿಯೂ (ಸಾವರೋಧಃ ಸನ್) ತನ್ನ ದಿವ್ಯಮಹಿಷಿಯರಾದ ಶ್ರೀದೇವಿಯೇ ಮೊದಲಾದವರೊಡನೆ (ಸ್ವಾತ್ಮ ನೈವ) ತನ್ನ ನಿಜಸ್ವರೂಪದಿಂದಲೇ (ವರ್ತತೇ) ಇದ್ದಾನೆ.

ಈ ಶ್ಲೋಕದಲ್ಲಿ ಶ್ರೀ ವೈಕುಂಠನಾಥನು ಶ್ರೀರಂಗಕ್ಷೇತ್ರದಲ್ಲಿ ತಾನೇ ಮೂಲಮೂರ್ತಿಯಾಗಿಯೂ, ಉತ್ಸವಮೂರ್ತಿಯಾಗಿಯೂ ಆವಿರ್ಭವಿಸಿ ಈ

ಕಲಿಯುಗದಲ್ಲಿ ಸಕಲ ಮನುಜನಯನಗೋಚರನಾಗಿದ್ದಾನೆಂದು ಸ್ತುತಿಸಿದ್ದಾರೆ. ಭಗವಂತನು ತನ್ನ ನಿಜಸ್ವರೂಪದಲ್ಲಿಯೇ ಶ್ರೀರಂಗದಲ್ಲಿಯೂ ತನ್ನ ಹೃದಯದಲ್ಲಿಯೂ ಇದ್ದಾನೆಂಬುದಾಗಿ ಆಚಾರ್ಯರು ಹೇಳಿದ್ದಾರೆ. ಪರಮ ದಯಾನಿಧಿಯಾದ ಭಗವಂತನು ತನ್ನನ್ನು ಪ್ರೀತಿಯಿಂದ ಸ್ತುತಿಸುವ ಭಕ್ತರ ಹೃದಯದಲ್ಲಿ ನೆಲಸಿದ್ದಾನೆ ಸ್ವಚ್ಛವಾದ ಸರೋವರದಲ್ಲಿ ಹಂಸವು ವಿಹರಿಸುವಂತೆ. ಭಗವಂತನು ತನ್ನ ದಿವ್ಯವಾದ ಬಾಹುಗಳಿಂದ ಭಕ್ತರಿಗೆ ಅಭಯವನ್ನು ತೋರುತ್ತಿದ್ದಾನೆ. ತನ್ನ ಭಕ್ತರಲ್ಲಿ ವಿಶ್ವಾಸವನ್ನುಂಟುಮಾಡುವುದಕ್ಕೋ ಎಂಬಂತೆ ಭಯಪಡಬೇಡಿ ಎಂದು ಅಭಯವನ್ನು ಸೂಚಿಸುತ್ತಾ ದಿವ್ಯಾಯುಧಗಳನ್ನು ತೋರುತ್ತಿದ್ದಾನೆ. ಹೀಗೆ ಭಗವಂತನ ಸಾನ್ನಿಧ್ಯವನ್ನು ಶ್ರೀಮದಾಚಾರ್ಯರು ಶ್ರೀರಂಗಾದಿ ದಿವ್ಯಕ್ಷೇತ್ರಗಳಲ್ಲಿಯೂ ತಮ್ಮ ಹೃದಯದಲ್ಲಿಯೂ ಸಾಕ್ಷಾತ್ಕರಿಸಿಕೊಂಡಿದ್ದಾರೆ ಈ ಶ್ಲೋಕದಲ್ಲಿ.

ರಂಗಾಸ್ಥಾನೇ ರಸಿಕಮಹಿತೇ ರಂಜಿತಾಶೇಷಚಿತ್ತೇ
ವಿದ್ವತ್ಸೇವಾವಿಮಲಮನಸಾ ವೇಂಕಟೇಶೇನ ಕ್ಲೃಪ್ತಂ ।
ಅಕ್ಲೇಶೇನ ಪ್ರಣಿಹಿತಧಿಯಾಂ ಆರುರುಕ್ಷೋರವಸ್ಥಾಂ
ಭಕ್ತಿಂ ಗಾಢಾಂ ದಿಶತು ಭಗವದ್ಧ್ಯಾನಸೋಪಾನಮೇತತ್ ॥ ೧೨ ॥

(ರಸಿಕಮಹಿತೇ) ರಸಜ್ಞರಿಂದ ಪೂಜಿಸಲ್ಪಡುತ್ತಿರುವುದೂ (ರಂಜಿತಾಶೇಷಚಿತ್ತೇ) ಎಲ್ಲರ ಮನಸ್ಸನ್ನೂ ಸಂತೋಷಗೊಳಿಸುವುದೂ ಆದ (ರಂಗಾಸ್ಥಾನೇ) ಶ್ರೀರಂಗವೆಂಬ ರಂಗಮಂದಿರದಲ್ಲಿ (ವಿದ್ವತ್ಸೇವಾವಿಮಲಮನಸಾ) ವಿದ್ವಾಂಸರನ್ನು ಸೇವಿಸುವುದರಿಂದ ನಿರ್ಮಲವಾದ ಮನಸ್ಸುಳ್ಳ (ವೇಂಕಟೇಶೇನ) ಶ್ರೀವೇಂಕಟೇಶಕವಿಗಳಿಂದ (ಕ್ಲೃಪ್ತಂ) ರಚಿಸಲ್ಪಟ್ಟ (ಏತತ್ ಭಗವದ್ಧ್ಯಾನಸೋಪಾನಂ) ಈ ಭಗವದ್ಧ್ಯಾನಸೋಪಾನವೆಂಬ ಸ್ತೋತ್ರವು (ಅಕ್ಲೇಶೇನ) ಶ್ರಮವೇ ಇಲ್ಲದಂತೆ (ಪ್ರಾಣಿಹಿತಧಿಯಾಂ ಅವಸ್ಥಾಂ) ಭಗವಂತನಲ್ಲಿ ಸ್ಥಿರವಾಗಿಡಲ್ಪಟ್ಟ ಮನಸ್ಸುಳ್ಳ ಯೋಗಿಗಳ ಸಾಕ್ಷಾತ್ಕಾರದ ಅವಸ್ಥೆಯನ್ನು (ಆರುರುಕ್ಷೋಃ) ಆರೋಹಿಸಲಿಚ್ಛೆಯುಳ್ಳವರಿಗೆ (ಗಾಢಾಂ ಭಕ್ತಿಂ) ದೃಢವಾದ ಭಕ್ತಿಯನ್ನು (ದಿಶತು) ಕೊಡಲಿ.

ಶ್ರೀರಂಗವೇ ಒಂದು ನಾಟಕಶಾಲೆ. ರಸಿಕರು ಇದನ್ನು ಪೂಜಿಸುತ್ತಿದ್ದಾರೆ. ಶೃಂಗಾರಾದಿ ನವರಸಗಳನ್ನು ತಿಳಿದ ಸಭಾಜನರು ಪೂಜಿಸುವಂತೆ

ಬ್ರಹ್ಮವಿತ್ತಮರಾದ ಶ್ರೀಮನ್ನಾಥಮುನಿ, ಯಾಮುನಮುನಿ, ರಾಮಾನುಜಮುನಿ ಮುಂತಾದವರ ಆದರಕ್ಕೆ ಪಾತ್ರವಾದುದು ಈ ಶ್ರೀರಂಗ ಎಂಬ ಭಾವ. 'ರಸೋ ವೈ ಸಃ' ಎಂಬ ಶ್ರುತಿವಚನಕ್ಕನುಸಾರವಾಗಿ ಪರಮಾನಂದಸ್ವರೂಪನಾದ ಪರಮಾತ್ಮನನ್ನು ತಿಳಿದ ಪೂರ್ವಾಚಾರ್ಯರುಗಳು ನಿಜವಾಗಿ ರಸಿಕರು. ನಾಟಕಶಾಲೆಯಲ್ಲಿ ಸಾಮಾಜಿಕರಿಗೆ ಆನಂದವುಂಟಾಗುವಂತೆ ಪರಬ್ರಹ್ಮವಸ್ತುವನ್ನರಿತವರಿಗೆ ಈ ಸ್ತೋತ್ರವೂ ನಿರತಿಶಯ.ವಾದ ಆನಂದವನ್ನುಂಟುಮಾಡುತ್ತದೆ ಎಂದು ಇದರ ಭಾವ. ಭಗವಂತನ ಸಾಕ್ಷಾತ್ಕಾರವೆಂಬ ಉನ್ನತಸ್ಥಾನಕ್ಕೆ ಏರಲಿಚ್ಛಿಸುವವರಿಗೆ ಈ ಸ್ತೋತ್ರ ಒಂದು ದೃಢವಾದ ಸೋಪಾನ. ಉನ್ನತವಾದ ಮೋಕ್ಷವನ್ನು ಪಡೆಯಲಾಶಿಸುವವರಿಗೆ ಭಗವದ್ಭಕ್ತಿ ಎಂಬ ಸೋಪಾನವನ್ನು ಈ ಸ್ತೋತ್ರಾನುಸಂಧಾನ ಒದಗಿಸುವುದು. ಈ ಧ್ಯಾನ ಸೋಪಾನವೂ ಕ್ರಮಕ್ರಮವಾಗಿ ಪಾದದಿಂದ ಆರಂಭವಾಗಿ ಭಗವಂತನ ಕಿರೀಟದವರೆಗೂ ಆರೋಹಕ್ರಮದಲ್ಲಿ ಮುಂದುವರಿಯುವುದು.

ಶ್ರೀಮದಾಚಾರ್ಯರು ರಚಿಸಿರುವ ಈ ಹನ್ನೆರಡು ಶ್ಲೋಕಗಳೂ ಹನ್ನೆರಡು ಮೆಟ್ಟಲುಗಳಿದ್ದಂತೆ. ಇವುಗಳನ್ನೇರಿ ಮೇಲೆ ಹೋದವರು ಆನಂದಾನುಭವವನ್ನು ಮಾಡುವರು. ಇದನ್ನು ಅನುಸಂಧಾನಮಾಡುವವರಿಗೆ ಭಗವಂತನು ಗಾಢವಾದ ಭಕ್ತಿಯನ್ನು ಕೊಡಲಿ ಎಂದು ಬೇಡಿರುವುದರಿಂದ ಆಚಾರ್ಯರ ಔದಾರ್ಯಕಾರುಣ್ಯಗಳು ಪ್ರಕಟವಾಗುತ್ತವೆ. 'ಪ್ರಣಿಹಿತಧಿಯಾಂ ಅವಸ್ಥಾಂ' ಎಂಬುವುದರಿಂದ ಚಲಚಿತ್ತರಿಗೆ ಯೋಗಸಿದ್ಧಿಯಾಗದೆಂದೂ ಸೂಚಿತವಾಗಿದೆ. ಮೋಕ್ಷಸಾಧಕವಾದ ಪರಭಕ್ತಿಯುಂಟಾಗಬೇಕಾದರೆ ಭಗವಂತನ ಸಹಜಕಾರುಣ್ಯ ಹಾಗೂ ಆಚಾರ್ಯಕಟಾಕ್ಷಾದಿಗಳು ಆವಶ್ಯಕ. ಭಗವಂತನನ್ನು ನಾವು ಪ್ರೀತಿಯಿಂದ ಸೇವಿಸಿದರೆ ಅವನ ಕರುಣೆ ನಮ್ಮ ಮೇಲೆ ಸಹಜವಾಗಿ ಪ್ರವಹಿಸಿ ನಮ್ಮನ್ನು ಕಾಪಾಡುವುದು. ಈ ಸ್ತೋತ್ರ ಇಂಥ ಭಕ್ತಿಯನ್ನುಂಟುಮಾಡುವ ಸಿದ್ಧಮಂತ್ರವಾಗಿದೆ.

---

ಕವಿತಾರ್ಕಿಕಸಿಂಹಾಯ ಕಲ್ಯಾಣಗುಣಶಾಲಿನೇ ।
ಶ್ರೀಮತೇ ವೇಂಕಟೇಶಾಯ ವೇದಾಂತಗುರವೇ ನಮಃ ॥

